# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಏಪ್ರಿಲ್ ೧೬, ೨೦೧೫ (ಚೈತ್ರ ೨೬, ಶಕ ವರ್ಷ ೧೯೩೭)<br>Bengaluru, Thursday, April 16, 2015 (Chaithra 26, Shaka Varsha 1937) | ಸಂಚಿಕೆ ೧೬<br>Issue 16 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಕೆ.ಎನ್. ಜಗದೀಶ್, ಸಹಾಯಕ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಸನ್ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ :**
1. ಅಪರ ನಿಬಂಧಕರು ವಿಚಾರಣೆಗಳು–07, ಕರ್ನಾಟಕ ಲೋಕಾಯುಕ್ತ ಇವರ ನಗರಾಭಿವೃದ್ಧಿ ಇಲಾಖೆಗೆ ಬರೆದ ಪತ್ರ ಸಂಖ್ಯೆ:ಕಂಪ್ಲೇಂಟ್/ಉಪಲೋಕ್/ಬಿಡಿ–5127/2012/ಎಆರ್ಇ–7 ದಿನಾಂಕ:9–4–2014.
2. ನಗರಾಭಿವೃದ್ಧಿ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ನಇ 69 ಡಿಎಂಕೆ 2014 ದಿನಾಂಕ:25–9–2014.

**ಪ್ರಸ್ತಾವನೆ :**

ಅಪರ ನಿಬಂಧಕರು ವಿಚಾರಣೆಗಳು–07, ಕರ್ನಾಟಕ ಲೋಕಾಯುಕ್ತ ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಕೆ.ಎನ್. ಜಗದೀಶ್, ಪೌರಾಯುಕ್ತರು, ನಗರಸಭೆ, ಕೋಲಾರ ಇವರು ಮಾನ್ಯ ಉಪ ಲೋಕಾಯುಕ್ತರ ಸೂಚನೆಯನ್ನು ಪಾಲಿಸದೇ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ 3(1)ರನ್ವಯ ದುರ್ನಡತೆಯಿಂದ ವರ್ತಿಸಿದ್ದು, ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಕಲಂ 12(3)ರನ್ವಯ ಮಾನ್ಯ ಉಪ ಲೋಕಾಯುಕ್ತರು ದಿನಾಂಕ:9–4–2014ರಂದು ಸಲ್ಲಿಸಿದ ವರದಿಯನ್ನು ಕಳುಹಿಸಿ, ಸದರಿ ಅಧಿಕಾರಿಯ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸುವಂತೆ ಕೋರಿದ್ದಾರೆ.

ಅದರಂತೆ, ನಗರಾಭಿವೃದ್ಧಿ ಇಲಾಖೆಯು ಮೇಲೆ ಓದಲಾದ(2)ರ ಅನಧಿಕೃತ ಟಿಪ್ಪಣಿಯಲ್ಲಿ ಶ್ರೀ ಕೆ.ಎನ್. ಜಗದೀಶ್ ಇವರ ವಿರುದ್ಧದ ಪ್ರಕರಣವನ್ನು ವಿಚಾರಣೆಗಾಗಿ ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮೇಲ್ಮನವಿ) ನಿಯಮಗಳು, 1957ರ ನಿಯಮ 15ರನ್ವಯ ಮಾತ್ರ ಇಲಾಖೆಯ ಸಹಮತಿ ನೀಡುವಂತೆ ಕೋರಿರುತ್ತದೆ.

ಇದನ್ನು ಪರಿಶೀಲಿಸಿದ ಶಿಸ್ತು ಪ್ರಾಧಿಕಾರಿಯಾದ ಸರ್ಕಾರವು ಪ್ರಕರಣವನ್ನು ಪೂರ್ಣ ಪ್ರಮಾಣದ ವಿಚಾರಣೆಗಾಗಿ ಸನ್ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಲು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 436 ರಾಲೆಪ 2014 ಬೆಂಗಳೂರು, ದಿನಾಂಕ:13–01–2015**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14–ಎ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಕೆ.ಎನ್. ಜಗದೀಶ್, ಸಹಾಯಕ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ (ಹಿಂದಿನ ಪೌರಾಯುಕ್ತರು, ನಗರಸಭೆ, ಕೋಲಾರ) ಇವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ಪೂರ್ಣ ಪ್ರಮಾಣದ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಉಪ ಲೋಕಾಯುಕ್ತರ ಮೂಲಕ ನಡೆಯಬೇಕೆಂದು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ & ಮುಂಗಡ).

**P.R. 70**

## ಕಂದಾಯ ಸಚಿವಾಲಯ

**ವಿಷಯ :** ಮೆ॥ ರಿಲಯಬಲ್ ವಿಂಡ್ ಎನರ್ಜಿ, ಬೆಂಗಳೂರು ಇವರಿಗೆ ಚಿತ್ರದುರ್ಗ ಜಿಲ್ಲೆಯಲ್ಲಿ ಪವನ ವಿದ್ಯುತ್ ಸ್ಥಾವರ ಸ್ಥಾಪನೆಗಾಗಿ 37–00 ಎಕರೆ ಜಮೀನನ್ನು ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಬಗ್ಗೆ

**ಓದಲಾಗಿದೆ :**

1. ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಲ್‌ಎನ್‌ಡಿ. ಸಿಆರ್.50/2009–10 ದಿನಾಂಕ: 06–11–2009.
2. ಉಪ ಅರಣ್ಯ ಸಂರಕ್ಷಣಾಧಿಕಾರಿ, ಚಿತ್ರದುರ್ಗ ಇವರ ಪತ್ರ ದಿನಾಂಕ: 21–07–2009.
3. ಸರ್ಕಾರದ ಆದೇಶ ಸಂಖ್ಯೆ:ಇಎನ್.326/ಎನ್‌ಸಿಇ.2006 ದಿನಾಂಕ: 28–01–2008.
4. ಮೆ॥ ರಿಲಯಬಲ್ ವಿಂಡ್ ಎನರ್ಜಿ, ಬೆಂಗಳೂರು ಇವರ ಪತ್ರ ದಿನಾಂಕ: 16–06–2014.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರು ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ತಾಲ್ಲೂಕು, ಕಸಬಾ ಹೋಬಳಿ, ದ್ಯಾಮವ್ವನಹಳ್ಳಿ ಗ್ರಾಮದ ಸ.ನಂ.109ಪಿ1ರಲ್ಲಿ 64–00 ಎಕರೆ ಹಾಗೂ ಚಳ್ಳಕೆರೆ ತಾಲ್ಲೂಕು, ಬಾಲೇನಹಳ್ಳಿ ಗ್ರಾಮದ ಸ.ನಂ.19ರಲ್ಲಿ 12–00 ಎಕರೆ ಒಟ್ಟು 76–00 ಎಕರೆ ವಿಸ್ತೀರ್ಣದ ಜಮೀನನ್ನು ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದನೆ ಸಲುವಾಗಿ ಮೆ॥ ರಿಲಯಬಲ್ ವಿಂಡ್ ಎನರ್ಜಿ ಲಿ. ಬೆಂಗಳೂರು ಇವರಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಬಗ್ಗೆ ಪ್ರಸ್ತಾಪಿಸಿದ್ದಾರೆ.

ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ವರದಿಯಂತೆ ದ್ಯಾಮವ್ವನಹಳ್ಳಿ ಗ್ರಾಮದ ಸರ್ವೆ ನಂ. 109ಪಿ1ರಲ್ಲಿ ಒಟ್ಟು 238–10 ಎಕರೆ ಜಮೀನಿನ ಪೈಕಿ 19–28 ಎಕರೆ ಜಮೀನು ಖರಾಬು ಜಮೀನೆಂದು ಮತ್ತು ಉಳಿದ ಜಮೀನು "**ಮುಫತ್ ಗೋಮಾಳ**" ಜಮೀನೆಂದು ವರ್ಗೀಕೃತವಾಗಿದೆ. ನಂತರ ಈ ಜಮೀನುಗಳನ್ನು ಲ್ಯಾಂಡ್ ಬ್ಯಾಂಕ್‌ಗೋಸ್ಕರ ಅರಣ್ಯ ಇಲಾಖೆಗೆ ವರ್ಗಾಯಿಸಲಾಗಿರುತ್ತದೆ. ಅದೇ ರೀತಿ ಬಾಲೇನಹಳ್ಳಿ ಗ್ರಾಮದ ಸರ್ವೆ ನಂ19ರಲ್ಲಿ 62–29 ಎಕರೆ ಜಮೀನನ್ನು ಗೋಮಾಳ ಜಮೀನೆಂದು ವರ್ಗೀಕರಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಪ್ರಸ್ತಾಪಿತ ಜಮೀನನ್ನು ಮೆ॥ ರಿಲಯಬಲ್ ವಿಂಡ್ ಎನರ್ಜಿ, ಬೆಂಗಳೂರು ಇವರಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಸಂಬಂಧ, ಉಪ ಅರಣ್ಯ ಸಂರಕ್ಷಣಾಧಿಕಾರಿ, ಚಿತ್ರದುರ್ಗ ಇವರು ಈ ಕೆಳಕಂಡ ಅಂಶಗಳನ್ನು ಸ್ಪಷ್ಟಪಡಿಸಿರುತ್ತಾರೆ.

1) ಅರಣ್ಯ ದಾಖಲೆಗಳನ್ವಯ ಸದರಿ ಜಮೀನುಗಳು ಅರಣ್ಯ ಜಮೀನೆಂದು ಘೋಷಣೆಯಾಗಿರುವುದಿಲ್ಲ.
2) ಸದರಿ ಜಮೀನುಗಳು ಯಾವುದೇ ಕಾಯ್ದಿಟ್ಟ ಪ್ರದೇಶಕ್ಕೆ ಒಳಪಡುವುದಿಲ್ಲ.
3) ಲ್ಯಾಂಡ್ ಬ್ಯಾಂಕ್ ಆದೇಶದಲ್ಲಿ ನಮೂದಿಸಿರುವ ಷರತ್ತುಗಳಂತೆ, ಕಂದಾಯ ಇಲಾಖೆ ಸದರಿ ಜಮೀನುಗಳನ್ನು ಲ್ಯಾಂಡ್ ಬ್ಯಾಂಕ್‌ನಿಂದ ಹಿಂದಕ್ಕೆ ಪಡೆದು ಗಾಳಿಯಂತ್ರ ಅಳವಡಿಸಲು ನೀಡಲು ನಿಯಮಾನುಸಾರ ಕ್ರಮ ಕೈಗೊಳ್ಳಬಹುದು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಸರ್ಕಾರದ ಆದೇಶದಲ್ಲಿ ಇಂಧನ ಇಲಾಖೆಯು ಮೆ॥ ರಿಲಯಬಲ್ ವಿಂಡ್ ಎನರ್ಜಿ ಕಂಪನಿಯವರಿಗೆ ಚಿತ್ರದುರ್ಗ ಜಿಲ್ಲೆಯಲ್ಲಿ 12.75 ಮೆಗವಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಅನುಮತಿ ನೀಡಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಮೆ॥ ರಿಲಯಬಲ್ ವಿಂಡ್ ಎನರ್ಜಿ, ಬೆಂಗಳೂರು ಇವರು 27 ಗಾಳಿಯಂತ್ರಗಳ ಬದಲಾಗಿ 14 ಗಾಳಿ ಯಂತ್ರಗಳನ್ನು ಅಳವಡಿಸಲು ಉದ್ದೇಶಿಸಿದ್ದು, ಅದಕ್ಕಾಗಿ ಹಿಂದೆ ಕೋರಿದ್ದ 76–00 ಎಕರೆ ಜಮೀನಿನ ಬದಲಾಗಿ ಪ್ರಸ್ತುತ ದ್ಯಾಮವ್ವನಹಳ್ಳಿ ಗ್ರಾಮದ ಸರ್ವೆ ನಂ.109/ಪಿ1ರಲ್ಲಿ 30–00 ಎಕರೆ ಹಾಗೂ ಬಾಲೇನಹಳ್ಳಿ ಗ್ರಾಮದ ಸರ್ವೆ ನಂ19ರಲ್ಲಿ 7–00 ಎಕರೆ ಒಟ್ಟು 37–00 ಎಕರೆ ಜಮೀನನ್ನು 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19ರನ್ವಯ **ಮಾರುಕಟ್ಟೆ ಬೆಲೆಯ ಶೇ.20ರಷ್ಟು** ಗುತ್ತಿಗೆ ದರ ವಿಧಿಸುವ ಷರತ್ತಿಗೊಳಪಟ್ಟು ನಿಯಮಾನುಸಾರ 30 ವರ್ಷಗಳ ಅವಧಿಗೆ ಗುತ್ತಿಗೆ ನೀಡುವ ಕುರಿತು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶದ ಸಂಖ್ಯೆ: ಆರ್‌ಡಿ 49 ಎಲ್‌ಜಿಸಿ 2013 ಬೆಂಗಳೂರು, ದಿನಾಂಕ:23–12–2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ತಾಲ್ಲೂಕು, ಕಸಬಾ ಹೋಬಳಿ, ದ್ಯಾಮವ್ವನಹಳ್ಳಿ ಗ್ರಾಮದ ಸರ್ವೆ ನಂ.109/ಪಿ1ರಲ್ಲಿ 30–00 ಎಕರೆ ಜಮೀನನ್ನು ಅರಣ್ಯ ಇಲಾಖೆಯ ಲ್ಯಾಂಡ್ ಬ್ಯಾಂಕ್ ಉದ್ದೇಶದಿಂದ ವಾಪಸ್ಸು ಪಡೆದು ಹಾಗೂ ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ಬಾಲೇನಹಳ್ಳಿ ಗ್ರಾಮದ ಸರ್ವೆ ನಂ.19ರಲ್ಲಿ 7–00 ಎಕರೆ ಜಮೀನನ್ನು ಕರ್ನಾಟಕ ಭೂಕಂದಾಯ ನಿಯಮಗಳು, 1966ರ ನಿಯಮ 97(4)ರಡಿ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, **ಒಟ್ಟು 37–00 ಎಕರೆ** ಜಮೀನನ್ನು ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದನೆ ಸಲುವಾಗಿ "**ಮೆ: ರಿಲಯಬಲ್ ವಿಂಡ್ ಎನರ್ಜಿ, ಬೆಂಗಳೂರು**" ಇವರಿಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ರ ನಿಯಮ 19ರನ್ವಯ ಜಮೀನಿನ **ಮಾರುಕಟ್ಟೆ ಬೆಲೆಯ ಶೇ.20ರಷ್ಟು** ಗುತ್ತಿಗೆ ದರ ಹಾಗೂ ಇತರೆ ಶುಲ್ಕ ವಿಧಿಸಿ, ಎರಡು ವರ್ಷಗಳಿಗೊಮ್ಮೆ ಶೇ.10ರಷ್ಟು ಗುತ್ತಿಗೆ ದರ ಹೆಚ್ಚಿಸುವ ಷರತ್ತಿನೊಂದಿಗೆ 30 ವರ್ಷಗಳ ಅವಧಿಗೆ ಕೆಳಕಂಡ ಷರತ್ತುಗಳನ್ನು ವಿಧಿಸಿ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಿ ಆದೇಶಿಸಿದೆ.

**ಷರತ್ತುಗಳು :**

1) ಉದ್ದೇಶಿತ ಜಮೀನನ್ನು ಯಾವ ಉದ್ದೇಶಕ್ಕಾಗಿ ಗುತ್ತಿಗೆ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು.
2) ಸದರಿ ಜಮೀನನ್ನು ಗುತ್ತಿಗೆ ನೀಡಿದ ದಿನಾಂಕದಿಂದ 2 ವರ್ಷದ ಒಳಗಾಗಿ ಉಪಯೋಗಿಸತಕ್ಕದ್ದು.
3) ಸದರಿ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ನೋಡಿಕೊಳ್ಳತಕ್ಕದ್ದು.
4) ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಿರುವ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಗುತ್ತಿಗೆ/ಉಪಗುತ್ತಿಗೆ ನೀಡಿರುವುದಾಗಲೀ, ಅಡಮಾನ ವರ್ಗಾವಣೆ ಇತರೆ ರೀತಿಯ ಪರಭಾರೆ ಮಾಡತಕ್ಕದ್ದಲ್ಲ.

5) ಕರ್ನಾಟಕ ಭೂ ಮಂಜೂರಾತಿ ನಿಯಮಗಳ (1969)ರ ನಿಯಮ 19ರ ಮೇರೆಗೆ ಗೊತ್ತುಪಡಿಸುವ ವಾರ್ಷಿಕ ಗುತ್ತಿಗೆ ದರವನ್ನು ತಪ್ಪದೇ ಪಾವತಿಸತಕ್ಕದ್ದು.

6) ಮೇಲ್ಕಂಡ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಸದರಿ ಜಮೀನನ್ನು ಸರ್ಕಾರದ ವಶಕ್ಕೆ ತೆಗೆದುಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಮಹಾಂತೇಗೌಡ ಎಸ್.ಎಲ್.**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ–3).

**P.R. 97**

**SC-25**

## ಕಂದಾಯ ಸಚಿವಾಲಯ

**ವಿಷಯ :** ಹಟ್ಟಿ ಚಿನ್ನದ ಗಣಿ ಕಂಪನಿ ನಿಯಮಿತ, ಹಟ್ಟಿ, ರಾಯಚೂರು ಜಿಲ್ಲೆ ಇವರಿಗೆ ರಾಯಚೂರು ಜಿಲ್ಲೆ, ದೇವದುರ್ಗ ತಾಲ್ಲೂಕು, ಊಟಿ ಗ್ರಾಮದ ಸ.ನಂ.38/3ರಲ್ಲಿ 6.38 ಹೆಕ್ಟೇರ್ (15.31 ಎಕರೆ) ಜಮೀನನ್ನು ಗಣಿ ಅನ್ವೇಷಣೆಗಾಗಿ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**

1. ಜಿಲ್ಲಾಧಿಕಾರಿ, ರಾಯಚೂರು ಜಿಲ್ಲೆ ಇವರ ಪತ್ರ ಸಂಖ್ಯೆ: ಕಂ.ಭೂಮಿ.7/2012–13 ದಿನಾಂಕ: 28–06–2012 ಮತ್ತು 20–08–2014.
2. ಕಾರ್ಯನಿರ್ವಾಹಕ ನಿರ್ದೇಶಕರು, ಹಟ್ಟಿ ಚಿನ್ನದ ಗಣಿ ಕಂಪನಿ ನಿಯಮಿತಿ ಇವರ ಮನವಿ ದಿನಾಂಕ:10–10–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಜಿಲ್ಲಾಧಿಕಾರಿ, ರಾಯಚೂರು ಇವರು ಹಟ್ಟಿ ಚಿನ್ನದ ಗಣಿ ಕಂಪನಿ ನಿಯಮಿತವು ಕರ್ನಾಟಕ ಸರ್ಕಾರದ ಸ್ವಾಯತ್ತತೆ ಹೊಂದಿ ಸುಮಾರು 65 ವರ್ಷಗಳಿಂದ ಚಿನ್ನದ ಅನ್ವೇಷಣೆ ಹಾಗೂ ಉತ್ಪಾದನೆಯಲ್ಲಿ ತೊಡಗಿದ್ದು ಸಂಸ್ಥೆಯು ಆರ್ಥಿಕವಾಗಿ ಒಳ್ಳೆ ಸ್ಥಿತಿಗತಿಗಳನ್ನು ಹೊಂದಿರುವುದಾಗಿ ತಿಳಿಸುತ್ತಾ, ದೇವದುರ್ಗ ತಾಲ್ಲೂಕಿನ ಊಟಿ ಗ್ರಾಮದ ಜಮೀನಿನ ಸರ್ವೆ ನಂ.38/3ರಲ್ಲಿ ಒಟ್ಟು ವಿಸ್ತೀರ್ಣ 6.35 ಹೆಕ್ಟೇರ್ (15.31 ಎಕರೆ) ಪ್ರದೇಶವನ್ನು ಗಣಿ ಅನ್ವೇಷಣೆಗಾಗಿ 20 ವರ್ಷಗಳ ಅವಧಿಗೆ ಗುತ್ತಿಗೆ ನೀಡುವಂತೆ ಕೋರಿರುತ್ತಾರೆ. ಮುಂದುವರೆದು ಜಿಲ್ಲಾಧಿಕಾರಿಗಳು ದಿನಾಂಕ: 20–08–2014ರ ಪತ್ರದಲ್ಲಿ ಪ್ರಸ್ತಾಪಿತ ಜಮೀನಿನ ಮಾರುಕಟ್ಟೆ ಬೆಲೆ ನಿರ್ಧರಣಾ ಸಮಿತಿಯ ಮಾರ್ಗಸೂಚಿ ದರ ಎಕರೆಯೊಂದಕ್ಕೆ ರೂ.66,000–00 ಹಾಗೂ ಸರಾಸರಿ ಮಾರುಕಟ್ಟೆ ದರ ಎಕರೆಯೊಂದಕ್ಕೆ ರೂ.97,209–00 ಆಗಿರುತ್ತದೆ ಎಂಬುದಾಗಿ ವರದಿ ನೀಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ, ಕಾರ್ಯನಿರ್ವಾಹಕ ನಿರ್ದೇಶಕರು, ಹಟ್ಟಿ ಚಿನ್ನದ ಗಣಿ ಕಂಪನಿ ನಿಯಮಿತ ಹಟ್ಟಿ, ರಾಯಚೂರು ಜಿಲ್ಲೆ ಇವರು ಜಿಲ್ಲಾಧಿಕಾರಿ, ರಾಯಚೂರು ಇವರಿಗೆ ಮನವಿ ಸಲ್ಲಿಸಿ ದೇವದುರ್ಗ ತಾಲ್ಲೂಕು, ಊಟಿ ಗ್ರಾಮದ ಸ.ನಂ.38/3ರಲ್ಲಿ ಒಟ್ಟು ವಿಸ್ತೀರ್ಣ 6.38 ಹೆಕ್ಟೇರ್ (15.31) ಎಕರೆ ಪ್ರದೇಶವನ್ನು ಗಣಿ ಅನ್ವೇಷಣೆಗಾಗಿ 20 ವರ್ಷಗಳ ಅವಧಿಗೆ ಗುತ್ತಿಗೆ ನೀಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19 (3)((ಬಿ)ರನ್ವಯ 30 ವರ್ಷಗಳ ಅವಧಿಗೆ ಗುತ್ತಿಗೆ ನೀಡುವ ಕುರಿತು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 28 ಎಲ್‌ಜಿಆರ್ 2012 ಬೆಂಗಳೂರು, ದಿನಾಂಕ: 15–12–2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ರಾಯಚೂರು ಜಿಲ್ಲೆ, ದೇವದುರ್ಗ ತಾಲ್ಲೂಕು, ಊಟಿ ಗ್ರಾಮದ ಸ.ನಂ.38/3ರಲ್ಲಿ ಒಟ್ಟು 6.38 ಹೆಕ್ಟೇರ್ (15.31 ಎಕರೆ) ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 97(4)ರಡಿಯಲ್ಲಿನ ಅವಕಾಶದಂತೆ ಗಾಯರಾಣ ಶೀರ್ಷಿಕೆಯಿಂದ ತಗ್ಗಿಸಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19ರನ್ವಯ ಮಾರುಕಟ್ಟೆ ದರದ ಶೇ.10ರಷ್ಟು ವಾರ್ಷಿಕ ಗುತ್ತಿಗೆ ದರ ನಿಗಧಿಪಡಿಸಿ ಹಾಗೂ ನಿಯಮಾನುಸಾರ ಇನ್ನಿತರ ದರಗಳನ್ನು ವಿಧಿಸಿ, ಪ್ರತಿ 2 ವರ್ಷಗಳಿಗೊಮ್ಮೆ ಶೇ.10ರಷ್ಟು ಗುತ್ತಿಗೆ ದರ ಹೆಚ್ಚಿಸುವ ಷರತ್ತಿಗೊಳಪಟ್ಟು 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಗಣಿ ಅನ್ವೇಷಣೆಗಾಗಿ ಹಟ್ಟಿ ಚಿನ್ನದ ಗಣಿ ಕಂಪನಿ ನಿಯಮಿತ, ಹಟ್ಟಿ, ರಾಯಚೂರು ಜಿಲ್ಲೆ ಇವರಿಗೆ ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಮಹಾಂತೇಗೌಡ ಎಸ್.ಎಲ್.**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ–3).

**P.R. 98**

**SC-25**

## ವಸತಿ ಸಚಿವಾಲಯ

**ವಿಷಯ :** ಬೆಂಗಳೂರು ಮಹಾನಗರದ ಸರ್ಕಾರಿ ಪ್ರದೇಶಗಳಲ್ಲಿನ ಕೊಳಗೇರಿ ನಿವಾಸಿಗಳಿಗೆ ಹಕ್ಕುಪತ್ರ ನೀಡುವ ಬಗ್ಗೆ ಪರಿಶೀಲಿಸಿ ವರದಿ ಸಲ್ಲಿಸಲು ಸಮಿತಿ ರಚನೆ ಕುರಿತು.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂ. ವಇ 43 ಕೊಮಂಇ 2009(ಭಾ), ಬೆಂಗಳೂರು ದಿನಾಂಕ: 26–07–2011.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಸತಿ ಇಲಾಖೆ ರವರ ಅಧ್ಯಕ್ಷತೆಯಲ್ಲಿ ದಿನಾಂಕ: 04–12–2014ರಂದು ನಡೆದ ಸಭೆಯ ನಡವಳಿ.

**ಪ್ರಸ್ತಾವನೆ :**

ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ದಿನಾಂಕ:26-07-2011ರ ಆದೇಶದಲ್ಲಿ ಕೊಳಚೆ ನಿವಾಸಿಗಳಿಗೆ ಹಕ್ಕು ಪತ್ರವನ್ನು ನೀಡುವ ಕುರಿತು ತಾತ್ವಿಕವಾಗಿ ನಿಖರವಾದ ಪ್ರಸ್ತಾವನೆಯನ್ನು ರೂಪಿಸಿ ಒಂದು ತಿಂಗಳೊಳಗಾಗಿ ವರದಿ ನೀಡಲು ನಿರ್ದೇಶಿಸಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಸತಿ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡಂತೆ ಒಂದು ಸಮಿತಿಯನ್ನು ರಚಿಸಲಾಗಿತ್ತು.

| | | |
|---|---|---|
| 1. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು | ಅಧ್ಯಕ್ಷರು |
| 2. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ | ಸದಸ್ಯರು |
| 3. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಸತಿ ಇಲಾಖೆ | ಸದಸ್ಯರು |
| 4. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ | ಸದಸ್ಯರು |
| 5. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಹಣಕಾಸು ಇಲಾಖೆ | ಸದಸ್ಯರು |
| 6. | ಸರ್ಕಾರದ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ | ಸದಸ್ಯರು |
| 7. | ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ | ಸದಸ್ಯರು |
| 8. | ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಸದಸ್ಯರು |
| 9. | ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ | ಸದಸ್ಯ-ಕಾರ್ಯದರ್ಶಿ |

ಸರ್ಕಾರದ ಪ್ರಧಾನ ಕಾರ್ಯದರ್ಶಿ ವಸತಿ ಇಲಾಖೆ ಅವರ ಅಧ್ಯಕ್ಷತೆಯಲ್ಲಿ ದಿನಾಂಕ: 04-12-2014ರಂದು ನಡೆದ ಸಮಿತಿಯ ಸಭೆಯಲ್ಲಿ ಚರ್ಚಿಸಲಾಗಿ, ಈ ಪ್ರಕರಣದ ಬಗ್ಗೆ ಈವರೆವಿಗೆ ಯಾವುದೇ ಗಮನಾರ್ಹ ಪ್ರಗತಿಯಾಗದಿರುವುದನ್ನು ಮನಗಂಡು, ಕೊಳಚೆ ಪ್ರದೇಶದ ನಿವಾಸಿಗಳಿಗೆ ನಿವೇಶನದ ಹಕ್ಕು ಪತ್ರ ಅಥವಾ ಷರತ್ತುಬದ್ಧ ನೋಂದಾಯಿತ ಕ್ರಯ ಪತ್ರ ನೀಡುವ ವಿಷಯವು ಅನೇಕ ಸಂದರ್ಭಗಳಲ್ಲಿ ಕರ್ನಾಟಕ ವಿಧಾನ ಮಂಡಲದ ಉಭಯ ಸದನಗಳಲ್ಲಿ ಪ್ರಸ್ತಾಪಿಸಲಾಗಿರುತ್ತದೆ. ಇದೊಂದು ತೀವ್ರ ಗಂಭೀರ ವಿಷಯವಾಗಿದೆ. ಆದ್ದರಿಂದ ಈ ಸಮಿತಿಯಲ್ಲಿನ ಸದಸ್ಯರು ಹಾಗೂ ಇಲಾಖಾ ಮುಖ್ಯಸ್ಥರು ಹಾಜರಾಗಿ ಈ ಬಗ್ಗೆ ಅವರ ಅಭಿಪ್ರಾಯಗಳನ್ನು ಹೇಳಬೇಕಾಗಿತ್ತು. ಆದರೆ, ಬಿ.ಬಿ.ಎಂ.ಪಿ. ಮತ್ತು ನಗರಾಭಿವೃದ್ಧಿ ಇಲಾಖೆಯ ಪ್ರತಿನಿಧಿಯಾಗಿ ಕಿರಿಯ ಅಧಿಕಾರಿಗಳು ಸಭೆಗೆ ಹಾಜರಾಗಿದ್ದು, ಅವರಿಗೆ ಈ ಬಗ್ಗೆ ಹೆಚ್ಚಿನ ವಿಷಯಗಳು ತಿಳಿದಿರುವುದಿಲ್ಲ. ಆದುದರಿಂದ ಅವರ ಅಭಿಪ್ರಾಯದ ಮೇರೆಗೆ ತೀರ್ಮಾನಗಳನ್ನು ತೆಗೆದುಕೊಳ್ಳಲು ಕಷ್ಟಸಾಧ್ಯವೆಂದು ಅಧ್ಯಕ್ಷರು ಅಭಿಪ್ರಾಯ ಪಟ್ಟಿದ್ದು ಹಾಗೂ ಕಂದಾಯ ಇಲಾಖೆಯಿಂದ ಅಧಿಕಾರಿಗಳು ಸದರಿ ಸಭೆಗೆ ಹಾಜರಾಗದೇ ಇರುವುದನ್ನು ಆಕ್ಷೇಪಿಸಿರುತ್ತಾರೆ. ಅಂತಿಮವಾಗಿ, ಸದರಿ ಸಮಿತಿಯನ್ನು ಪುನರ್ ರಚಿಸುವ ಅವಶ್ಯಕತೆ ಇರುವುದರಿಂದ, ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ಪುನರ್‌ರಚಿಸಲು ಸದರಿ ಸಭೆಯಲ್ಲಿ ನಿರ್ಣಯಿಸಲಾಯಿತು.

ಸದರಿ ನಿರ್ಣಯದ ಹಿನ್ನಲೆಯಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ 135 ಕೊಮಂಇ 2014, ಬೆಂಗಳೂರು, ದಿನಾಂಕ: 17ನೇ ಜನವರಿ 2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಸರ್ಕಾರದ ಆದೇಶ ಸಂಖ್ಯೆ: ವಇ 43 ಕೊಮಂಇ 2009(ಭಾ), ಬೆಂಗಳೂರು ದಿನಾಂಕ: 26-07-2011ರಲ್ಲಿ ನೇಮಿಸಲಾದ ಸಮಿತಿಯನ್ನು ಮಾರ್ಪಡಿಸಿ, ಈ ಕೆಳಕಂಡ ಅಧಿಕಾರಿ/ಸದಸ್ಯರುಗಳನ್ನು ಒಳಗೊಂಡಂತೆ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | | |
|---|---|---|---|
| 1. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು | – | ಅಧ್ಯಕ್ಷರು |
| 2. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ | – | ಸದಸ್ಯರು |
| 3, | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಸತಿ ಇಲಾಖೆ | – | ಸದಸ್ಯರು |
| 4. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ | – | ಸದಸ್ಯರು |
| 5. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ | – | ಸದಸ್ಯರು |
| 6. | ಸರ್ಕಾರದ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ | – | ಸದಸ್ಯರು |
| 7. | ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ | – | ಸದಸ್ಯರು |
| 8. | ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಸದಸ್ಯರು |
| 9. | ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ | – | ಸದಸ್ಯ-ಕಾರ್ಯದರ್ಶಿ |

ಸದರಿ ಸಮಿತಿಯು ಈ ಕೆಳಕಂಡ ಅಂಶಗಳನ್ನು ಪರಿಶೀಲಿಸಿ, ವರದಿಯನ್ನು ಸಲ್ಲಿಸತಕ್ಕದ್ದು.

1. ಕರ್ನಾಟಕ ರಾಜ್ಯವನ್ನು ಗುಡಿಸಲು ರಹಿತ ರಾಜ್ಯವನ್ನಾಗಿ ಮಾಡುವ ಸದುದ್ದೇಶದಿಂದ ಹಾಗೂ ಕೊಳಚೆ ಪ್ರದೇಶದಲ್ಲಿನ ನಿವಾಸಿಗಳಿಗೆ ಹಕ್ಕು ಪತ್ರವನ್ನು ನೀಡುವ ಸಲುವಾಗಿ ಪ್ರಾರಂಭಿಕವಾಗಿ ಬೆಂಗಳೂರು ಮಹಾನಗರದಲ್ಲಿನ ಸರ್ಕಾರಿ ಪ್ರದೇಶಗಳಲ್ಲಿನ ಕೊಳಗೇರಿ ವಾಸಿಗಳಿಗೆ ಅವರು ವಾಸ ಮಾಡುವ ಜಾಗದ ಹಕ್ಕು ಪತ್ರಗಳನ್ನು ನೀಡುವ ಕುರಿತು ಸಾಧಕ-ಭಾದಕಗಳ ಬಗ್ಗೆ ವಿವರವಾಗಿ ಪರಿಶೀಲಿಸಿ ವರದಿ ನೀಡುವುದು.
2. ಕೊಳಗೇರಿ ನಿವಾಸಿಗಳು ತಾವು ವಾಸ ಮಾಡುವ ಜಾಗದ ಕುರಿತು ಹಕ್ಕು ಪತ್ರ ಪಡೆಯಲು ಸೂಕ್ತ ಬೆಲೆಯನ್ನು ನಿಗಧಿಪಡಿಸುವ ಬಗ್ಗೆ.
3. ಹಕ್ಕು ಪತ್ರಗಳನ್ನು ನೀಡಿರುವುದನ್ನು ಪರಭಾರೆ ಮಾಡಿರುವುದನ್ನು ಪರಿಶೀಲಿಸಿ ಮೂಲ ನಿವಾಸಿಗಳಿಗೆ ನೀಡಿರುವ ಹಕ್ಕುಪತ್ರಗಳನ್ನು ರದ್ದುಪಡಿಸಿ ಕೊಳಚೆ ಪ್ರದೇಶದ ಮನೆಗಳಲ್ಲಿ ಸುಮಾರು 15-20 ವರ್ಷದಿಂದ ವಾಸ ಮಾಡುತ್ತಿರುವ ನಿವಾಸಿಗಳಿಗೆ ಮರು ಹಕ್ಕು ಪತ್ರಗಳನ್ನು ನೀಡುವ ಬಗ್ಗೆ ಹಾಗೂ ವಾಸ ಸ್ಥಳದ ಭೂ ಒಡೆತನದ ಹಕ್ಕು ನೀಡುವ ಕುರಿತು.

4. ಇನ್ನು ಮುಂದೆ ಹೊಸ ಕೊಳಚೆ ಪ್ರದೇಶಗಳು ಉದ್ಭವಿಸುವುದನ್ನು ತಡೆಗಟ್ಟಲು ಕೈಗೊಳ್ಳಬಹುದಾದ ಕ್ರಮಗಳ ಬಗ್ಗೆ.
5. ಖಾಸಗಿ ಒಡೆತನದಲ್ಲಿರುವ ಕೊಳಚೆ ಪ್ರದೇಶಗಳಲ್ಲಿನ ನಿವಾಸಿಗಳಿಗೆ ಪುನರ್ವಸತಿ ಕಲ್ಪಿಸಲು ಖಾಸಗಿ ಭೂಮಾಲೀಕರ ಜೊತೆಗೂಡಿ ಜಾಯಿಂಟ್ ವೆಂಚರ್ ಯೋಜನೆಯಲ್ಲಿ ಮನೆಗಳನ್ನು ನಿರ್ಮಿಸುವುದು ಅಥವಾ ಇದು ಸಾಧ್ಯವಿಲ್ಲದಿದ್ದಲ್ಲಿ ಖಾಸಗಿ ಭೂ ಮಾಲೀಕರಿಗೆ ಟಿ.ಡಿ.ಆರ್. ನೀಡುವ ಬಗ್ಗೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಎಸ್. ಶಿವಕುಮಾರಸ್ವಾಮಿ,**

ಸರ್ಕಾರದ ಅಧೀನ ಕಾರ್ಯದರ್ಶಿ-2 (ಪ್ರ).

ವಸತಿ ಇಲಾಖೆ

**P.R. 99**

**SC-50**

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಟಿ. ಗೋವಿಂದಯ್ಯ, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು, ಇವರ ವಿರುದ್ಧದ ಇಲಾಖಾ ವಿಚಾರಣೆ – ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ

**ಓದಲಾಗಿದೆ :**

1. ಸರ್ಕಾರದ ಆದೇಶ ಸಂ. ಆಇ 49 ವಾತೆತ 2012 ದಿನಾಂಕ: 11-03-2013.
2. ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ: 18-07-2013
3. 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಆಇ 49 ವಾತೆತ 2012 ದಿನಾಂಕ: 19-09-2013.
4. 2ನೇ ಕಾರಣ ಕೇಳುವ ನೋಟೀಸ್‌ಗೆ ಶ್ರೀ ಟಿ. ಗೋವಿಂದಯ್ಯ, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು ರವರು ನೀಡಿರುವ ಸಮಜಾಯಿಷಿ ದಿನಾಂಕ: 24-12-2013.

**ಪ್ರಸ್ತಾವನೆ :**

ಶ್ರೀ ಟಿ. ಗೋವಿಂದಯ್ಯ, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು ಇವರು ದಿನಾಂಕ: 01-02-2010 ರಿಂದ 31-10-2010ರ ಅವಧಿಯಲ್ಲಿ ಬಳ್ಳಾರಿಯ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿ-490 ರ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕಬ್ಬಿಣದ ಅದಿರಿನ ವರ್ತಕರುಗಳು ಹೂಡುವಳಿ ತೆರಿಗೆ ಮರುಪಾವತಿಗೆ ಕೋರಿದ ಮನವಿಗಳನ್ನು, ವಾಣಿಜ್ಯ ತೆರಿಗೆಗಳ ಆಯುಕ್ತರ ದಿನಾಂಕ: 07-06-2006ರ ಸುತ್ತೋಲೆ ಸಂಖ್ಯೆ: 9/2006-07 ಮತ್ತು ದಿನಾಂಕ: 02-03-1995ರ ಸುತ್ತೋಲೆ ಸಂಖ್ಯೆ: 45 ಗಳನ್ವಯ ಕೂಲಂಕಷವಾಗಿ ಪರಿಶೀಲಿಸದೇ ಮರುಪಾವತಿ ಪ್ರಸ್ತಾವನೆಯನ್ನು ವಿಭಾಗದ ಜಂಟಿ ಆಯುಕ್ತರಾಗಿದ್ದ ಶ್ರೀ ಎ.ಕೆ.ವೈ. ಸೈಯದ್ ಅವರ ಅನುಮೋದನೆಗಾಗಿ ಸಲ್ಲಿಸಿ, ಸುಮಾರು 1,35,03,882/- ರೂ. ಗಳ ಭಾರಿ ಮೊತ್ತದ ತೆರಿಗೆಯನ್ನು ತಪ್ಪಾಗಿ ಮರುಪಾವತಿಸಿ ತೀವ್ರತರದ ದುರ್ನಡತೆಯನ್ನೆಸಗಿರವ ಆರೋಪಕ್ಕಾಗಿ ಅವರ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿನಾಂಕ: 11-03-2013ರ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ಫ.ನಿ.ಗುಡ್ಡಾಕಾರ, ನಿವೃತ್ತ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು.

ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2) ರಲ್ಲಿ ಓದಲಾದ ದಿನಾಂಕ: 18-07-2013ರ ವಿಚಾರಣಾ ವರದಿ ಸಲ್ಲಿಸಿ ಆರೋಪ ಕುರಿತಂತೆ ಈ ಕೆಳಕಂಡ ನಿರ್ಣಯ ನೀಡಿರುತ್ತಾರೆ.

> ದಾವಣಗೆರೆ ಜಂಟಿ ಆಯುಕ್ತರ ಕಛೇರಿಯಲ್ಲಿ 2010ರ ಜುಲೈ, ಆಗಸ್ಟ್ ತಿಂಗಳಲ್ಲಿ ಮಾರ್ಚ್, ಏಪ್ರಿಲ್, ಮೇ ತಿಂಗಳ ತೆರಿಗೆ ಮರುಪಾವತಿ ಕಡತಗಳನ್ನು ಪರಿಶೀಲಿಸಿದ ವಾಣಿಜ್ಯ ತೆರಿಗೆ ಅಧಿಕಾರಿ (ಲೆಕ್ಕ ಪರಿಶೋಧನೆ-12), ಬೆಂಗಳೂರು ಅವರು ಸಾಕ್ಷ್ಯ ನೀಡಿ ಬಳ್ಳಾರಿಯ ಭಾರತ್ ಮೈನ್ಸ್ ಅಂಡ್ ಮಿನರಲ್ಸ್, ಸಾಯಿ ಮಿನರಲ್ಸ್, ಟಿನ್ ಎಕ್ಸ್‌ಪೋರ್ಟ್ಸ್ ವರ್ತಕರ ಪರೋಕ್ಷ ರಫ್ತುಗಳಿಗೆ ಸಂಬಂಧಪಟ್ಟ ದಾಖಲೆಗಳಾದ ನಮೂನೆ-ಎಚ್, ಮರುಪಾವತಿ ಆದೇಶಗಳನ್ನು ಒಳಗೊಂಡ ದಾಖಲೆಗಳನ್ನು ಪರಿಶೀಲಿಸಿದ್ದು, ಮರುಪಾವತಿ ಆದೇಶದಲ್ಲಿ ಮುಂದಿನ ಪರಿಶೀಲನೆ ಹಾಗೂ ಶಾಸನಬದ್ಧ ದಾಖಲೆಗಳನ್ನು ಹಾಜರುಪಡಿಸುವ ಷರತ್ತುಗಳಿಗೆ ಒಳಪಟ್ಟು ನಿಯಮ ಬಾಹಿರವಾಗಿ ಮರುಪಾವತಿ ಆದೇಶ ಸಿದ್ಧಪಡಿಸಲಾಗಿದೆ. ಜಂಟಿ ಆಯುಕ್ತರು ಸದರಿ ಆದೇಶದ ಮೇಲೆ ತಮ್ಮ ತಕರಾರನ್ನು ದಾಖಲಿಸಬೇಕಿತ್ತು. ಆದರೆ ಅವರು ಆ ರೀತಿ ಮಾಡದೇ ವರ್ತಕರಿಗೆ ಅನುಕೂಲ ಮಾಡಿ ಕೊಡುವ ದೃಷ್ಟಿಯಿಂದ ಕೂಲಂಕುಶವಾಗಿ ಪರಿಶೀಲಿಸದೇ ಮೇಲುರುಜು ಮಾಡಿ ತಪ್ಪಾಗಿ ಮರುಪಾವತಿ ಮಾಡಿದ್ದಾರೆ ಎಂದು ಸಾಕ್ಷ್ಯ ನೀಡಿದ್ದಾರೆ.
>
> ಆರೋಪಿತರು ತಮ್ಮ ವಾದ ಮಂಡಿಸಿ, ಕೇವಲ ದಾವಣಗೆರೆ ಜಂಟಿ ಆಯುಕ್ತರ ಕಛೇರಿಯ ದಾಖಲೆಗಳನ್ನು ಮಾತ್ರ ಪರೀಶೀಲಿಸಿ ಸಾಕ್ಷಿಯು ವರದಿ ನೀಡಿದ್ದಾರೆ. ತಾವು ವರ್ತಕರು ಸಲ್ಲಿಸಿದ ಎಚ್ ನಮೂನೆಗಳನ್ನು ಪಡೆದ ನಂತರವೇ ಮರುಪಾವತಿ ಆದೇಶಗಳನ್ನು ಹೊರಡಿಸಿದ್ದು, ಒಂದು ವೇಳೆ ಸಾಕ್ಷಿದಾರರು ಬಳ್ಳಾರಿ ಕಛೇರಿಯ ದಾಖಲೆಗಳನ್ನು ಪರಿಶೀಲಿಸಿದ್ದಲ್ಲಿ, ವಾಸ್ತವವು ತಿಳಿಯುತ್ತಿತ್ತು. ದಿನಾಂಕ:07-06-2006ರ ಸುತ್ತೋಲೆಯಂತೆ ವರ್ತಕರಿಂದ ಸಲ್ಲಿಸಲ್ಪಟ್ಟ ನಮೂನೆಗಳನ್ನು ಸಿಎಸ್‌ಟಿ ಕಾಯಿದೆ 1956ರ ಕಲಂ 9/2 ರನ್ವಯ ಪರಿಶೀಲನೆ ಮಾಡಿದ ನಂತರವೇ ಮರುಪಾವತಿ ಮಾಡಲಾಗಿದೆ. ತಾವು ಮಾಡಿರುವ ಮರುಪಾವತಿಯು ಕೆಎಸ್‌ಟಿ ಕಾಯಿದೆ 1957ಕ್ಕೆ ಮಾತ್ರ ಸಂಬಂಧಿಸಿದೆ. ತಪ್ಪು ಮರುಪಾವತಿ ಆಗಿದೆ ಎಂದು ಪರಿಗಣಿಸಲು ಕೆ ವ್ಯಾಟ್ ಕಾಯಿದೆ 2003ರ ಸೆಕ್ಷನ್ 3 ರಡಿ ಲೆಕ್ಕಪರಿಶೋಧನೆ ಕೈಗೊಂಡಿಲ್ಲವಾದ ಕಾರಣ ವರದಿ ಸರಿ ಇರುವುದಿಲ್ಲ. ಆದ್ದರಿಂದ ಅದನ್ನು ಪರಿಗಣಿಸದೇ ತಮ್ಮನ್ನು ಆರೋಪ ಮುಕ್ತರನ್ನಾಗಿಸಲು ಕೋರಿದ್ದಾರೆ. ಅವರು ಸಲ್ಲಿಸಿದ ಅಪರ ಆಯುಕ್ತರ (ಕಾನೂನು ಮತ್ತು ಕಾರ್ಯನೀತಿ) ಅವರ ದಿನಾಂಕ: 30-05-2006ರ ಪತ್ರವು 2005 ಮತ್ತು 2006ನೇ ಸಾಲಿಗೆ ಮಾತ್ರ ಸಂಬಂಧಿಸಿವೆ.

ಆದರೆ 3ನೇ ಸಾಕ್ಷಿಯು ಗುರುತಿಸಿದ ದಾಖಲೆಗಳು ತಪ್ಪು ಮರುಪಾವತಿ ಆಗಿರುವುದನ್ನು ದೃಢಪಡಿಸುತ್ತವೆ ಹಾಗೂ ಅದನ್ನು ಒಂದು ಮತ್ತು ಎರಡನೇ ಸಾಕ್ಷಿಗಳು ಸಮರ್ಥಿಸಿದ್ದಾರೆ. ಆದ್ದರಿಂದ ಆರೋಪ ಸಾಬೀತಾಗಿದೆ.

ವಿಚಾರಣಾ ವರದಿ ಕುರಿತು ಅಹವಾಲು ಏನಾದರೂ ಇದ್ದಲ್ಲಿ ಸಲ್ಲಿಸುವಂತೆ ಮೇಲೆ (3)ರಲ್ಲಿ ಓದಲಾದ ದಿನಾಂಕ: 19–09–2013ರ ನೋಟೀಸಿನಲ್ಲಿ ಶ್ರೀ ಟಿ. ಗೋವಿಂದಯ್ಯ, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು ಇವರಿಗೆ ಅವಕಾಶ ನೀಡಲಾಯಿತು.

ಸದರಿ ನೋಟೀಸಿಗೆ ಆರೋಪಿತರು ಮೇಲೆ (4) ರಲ್ಲಿ ಓದಲಾದ ದಿನಾಂಕ: 24–12–2013ರ ಉತ್ತರ ನೀಡಿ ಪ್ರಕರಣದಲ್ಲಿನ ಸಾಕ್ಷಿಗಳು ಅಸಂಬದ್ಧ ಸಾಕ್ಷಿ ನುಡಿದಿದ್ದು, ವಿಚಾರಣಾಧಿಕಾರಿಗಳು ತಮ್ಮ ವರದಿಯಲ್ಲಿ ಆರೋಪಗಳು ನಿಚ್ಚಳವಾಗಿ ರುಜುವಾತಾಗಿವೆ ಎಂದಿರುವುದು ಸಮಂಜಸವಲ್ಲವೆಂದು ತಿಳಿಸುತ್ತಾ, ಈ ಕೆಳಕಂಡ ಕಾರಣಗಳ ಆಧಾರದಲ್ಲಿ ಅವರನ್ನು ದೋಷಮುಕ್ತನನ್ನಾಗಿ ಮಾಡಬೇಕೆಂದು ಕೋರಿರುತ್ತಾರೆ.

1) ತಾನು ಹೂಡುವಳಿ ತೆರಿಗೆ ಮರುಪಾವತಿಸುವ ಮುನ್ನ ಕೇಂದ್ರ ಮಾರಾಟ ತೆರಿಗೆಯನ್ವಯ ಆದೇಶಗಳನ್ನು ಹೊರಡಿಸಿ, ಕೇಂದ್ರ ಮಾರಾಟ ತೆರಿಗೆ ರೂ. 32,04,818/– ಗಳನ್ನು ಹೆಚ್ಚಿನ ತೆರಿಗೆಯಾಗಿ ವಿಧಿಸಿ, ಮರುಪಾವತಿಯಲ್ಲಿ ಕಡಿತ ಮಾಡಿರುತ್ತೇನೆ.

2) ಕೇಂದ್ರ ಮಾರಾಟ ತೆರಿಗೆಯನ್ವಯ ಆದೇಶಗಳನ್ನು ಹೊರಡಿಸುವಾಗ Direct Export ವಹಿವಾಟಿಗೆ ತೆರಿಗೆ ವಿನಾಯಿತಿ ನೀಡುವಾಗ Bill of Lading, Agreement ಹಾಗೂ Commercial Invoices ಗಳನ್ನು ಪಡೆದು ಸಂಬಂಧಪಟ್ಟ ಕಡತದಲ್ಲಿ ಇರಿಸಿರುತ್ತೇನೆ.

3) ಹೂಡುವಳಿ ತೆರಿಗೆ ಮರುಪಾವತಿಸುವಾಗ ನಡಾವಳಿಗಳನ್ನು ತಯಾರಿಸಿ ಕಡತದಲ್ಲಿ ಇರಿಸಿದ್ದೇನೆ. ಹಾಗೂ ವಿಭಾಗದ ಮುಖ್ಯಸ್ಥರ ಪರಿಶೀಲನೆಗೆ ಸಲ್ಲಿಸಿರುತ್ತೇನೆ.

4) ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು ತಾನು ಸಲ್ಲಿಸಿದ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಮರುಪಾವತಿ ಆದೇಶಗಳಿಗೆ ಮೇಲುರುಜು ಮಾಡಿದ್ದಾರೆ.

ಆರೋಪಿತರ ಸಮಜಾಯಿಷಿಯನ್ನು ದಾಖಲೆಗಳೊಡನೆ ಪರಿಶೀಲಿಸಲಾಗಿ ಆರೋಪಿತರ ವಿರುದ್ಧದ ಆರೋಪಗಳನ್ನು ಸಾಬೀತುಪಡಿಸಲು ಮಂಡನಾಧಿಕಾರಿಗಳು ಶಿಸ್ತು ಪ್ರಾಧಿಕಾರದ ಪರ 1 ರಿಂದ 3ನೇ ಸಾಕ್ಷಿದಾರರನ್ನು ಪರೀಕ್ಷಿಸಿ ಅವರ ಹೇಳಿಕೆಗಳ ಜೊತೆಯಲ್ಲಿ ನಿಶಾನೆ ಪಿ–1 ರಿಂದ ಪಿ–18ರವರೆಗಿನ ದಾಖಲೆಗಳನ್ನು ಗುರುತಿಸಲಾಗಿರುತ್ತದೆ. ಸಾಕ್ಷಿದಾರರಲ್ಲಿ ಪ್ರಾ.ಸಾ. ನಂ.2 ರವರು ಸಾಂದರ್ಭಿಕ ಸಾಕ್ಷಿದಾರರಾಗಿದ್ದು, ಅವರ ಹೇಳಿಕೆ ಅಷ್ಟೊಂದು ಗಮನಾರ್ಹವಾಗಿರುವುದಿಲ್ಲ. ಆದರೆ ಪ್ರಾ.ಸಾ. ನಂ.1 ಮತ್ತು 3 ಇವರು ಪ್ರಮುಖ ಸಾಕ್ಷಿದಾರರಾಗಿದ್ದು, ಅವರು ಆರೋಪಿತರ ವಿರುದ್ಧದ ಆರೋಪವನ್ನು ದೃಢೀಕರಿಸಿ ಸಾಕ್ಷಿ ಹೇಳಿಕೆ ನೀಡಿದ್ದು, ಅವುಗಳನ್ನು ಪುಷ್ಟೀಕರಿಸಲು ಮತ್ತು ಸಮರ್ಥಿಸಲು ನಿಶಾನೆ ಪಿ 1 ರಿಂದ ಪಿ 18 ರವರೆಗಿನ ದಾಖಲೆಗಳು ಪ್ರಮುಖವಾಗಿವೆ. ಆರೋಪಿತರು ಖುದ್ದಾಗಿ ಹಾಗೂ ತಮ್ಮ ಪರ ರಕ್ಷಣಾ ಸಹಾಯಕರ ಮುಖಾಂತರ ಸಾಕ್ಷಿದಾರರನ್ನು ಪಾಟಿ ಸವಾಲಿಗೆ ಒಳಪಡಿಸಿದ್ದರೂ ಸಹ ಯಾವುದೇ ಪ್ರಮುಖ ಸಂಗತಿಗಳನ್ನು ಅವರಿಗೆ ಅನುಕೂಲವಾಗುವ ಹಾಗೇ ಹೊರಡಿಸಲು ಸಮರ್ಥರಾಗಿಲ್ಲ. ಪ್ರಾ.ಸಾ. ನಂ.3ರವರು ತಮ್ಮ ಸಾಕ್ಷಿ ಹೇಳಿಕೆಯಲ್ಲಿ ತಾವು 2007 ರಿಂದ 2011ನೇ ಅವಧಿಯಲ್ಲಿ ವಾಣಿಜ್ಯ ತೆರಿಗೆ ಅಧಿಕಾರಿ (ಲೆಕ್ಕಪರಿಶೋಧನೆ–12) ಬೆಂಗಳೂರು ವಿಭಾಗ–1 ರಲ್ಲಿ ಕಾರ್ಯನಿರ್ವಹಿಸಿದ್ದು, ವಾಣಿಜ್ಯ ತೆರಿಗೆಗಳ ಆಯುಕ್ತರ ಲಿಖಿತ ಆದೇಶದ ಮೇರೆಗೆ ತಾವು ದಾವಣಗೆರೆ ವಿಭಾಗದ ಜಂಟಿ ಆಯುಕ್ತರ ಕಛೇರಿಗೆ ಭೇಟಿ ನೀಡಿ, 2010ರ ಮಾರ್ಚ್ ಏಪ್ರಿಲ್ ಮತ್ತು ಮೇ ತಿಂಗಳುಗಳ ತೆರಿಗೆ ಮರುಪಾವತಿ ಕಡತಗಳನ್ನು ತಾವು ಜುಲೈ ಮತ್ತು ಆಗಸ್ಟ್ ತಿಂಗಳುಗಳಲ್ಲಿ ಪರಿಶೀಲಿಸಿದ್ದು;, ಅವುಗಳು ಕಾನೂನು ಬದ್ಧವಾಗಿವೆಯೋ ಅಥವಾ ಇಲ್ಲವೋ ಎಂಬುದನ್ನು ಪರಿಶೀಲಿಸಲಾಯಿತು, ದಾವಣಗೆರೆ ವಿಭಾಗಕ್ಕೆ ಸಂಬಂಧಪಟ್ಟ ತಾಲ್ಲೂಕುಗಳಾದ ಚಳ್ಳಕೆರೆ, ದಾವಣಗೆರೆ, ಬಳ್ಳಾರಿ, ಹೊಸಕೋಟೆ, ಚಿತ್ರದುರ್ಗ, ಗಂಗಾವತಿ ಹಾಗೂ ಕೊಪ್ಪಳಗಳಿಗೆ ಸಂಬಂಧಪಟ್ಟ ದಾಖಲೆಗಳನ್ನು ಪರಿಶೀಲಿಸಿದ್ದು, ಬಳ್ಳಾರಿ ಎಲ್.ವಿ.ಓ. ಕಛೇರಿಗೆ ಸಂಬಂಧಪಟ್ಟ ಮೂರು ಕಡತಗಳಲ್ಲಿ, ಮೊದಲನೆಯದಾಗಿ ಮೆ: ಭಾರತ್ ಮೈನ್ಸ್ ಆಂಡ್ ಮಿನರಲ್ಸ್, ಬಳ್ಳಾರಿ ಪ್ರಕರಣಕ್ಕೆ ಸಂಬಂಧಪಟ್ಟಂತೆ ಪರಿಶೀಲಿಸಲಾದ ತೆರಿಗೆ ಮರುಪಾವತಿ ಮಾಡಿದ ಒಟ್ಟು ರೂ. 1,03,08,731/– ಹಾಗೂ ಮೆ: ಸಾಯಿ ಮಿನರಲ್ಸ್, ಬಳ್ಳಾರಿ ಇವರಿಗೆ ಸಂಬಂಧಪಟ್ಟಂತೆ ತೆರಿಗೆ ಮರುಪಾವತಿ ಮಾಡಿದ ಒಟ್ಟು ರೂ. 8,81,577/– ಮತ್ತು ಮೆ: ಟೆನ್ ಎಕ್ಸ್‌ಪೋರ್ಟ್ಸ್ ಪ್ರೈ, ಲಿ. ಬಳ್ಳಾರಿ ಇವರಿಗೆ ಸಂಬಂಧಪಟ್ಟ ತೆರಿಗೆ ಮರುಪಾವತಿ ಮಾಡಿದ ಒಟ್ಟು ರೂ. 23,13,574/– ಗಳಿಗೆ ಸಂಬಂಧಪಟ್ಟಂತೆ, ಪರೋಕ್ಷ ರಫ್ತುಗಳಿಗೆ ಸಂಬಂಧಪಟ್ಟ ದಾಖಲೆಗಳಾದ, ಶಾಸನಬದ್ಧ ನಮೂನೆ–ಹೆಚ್, ಮರುಪಾವತಿ ಆದೇಶಗಳಲ್ಲಿ ಮುಂದಿನ ಪರಿಶೀಲನೆಗೆ ಹಾಗೂ ಶಾಸನಬದ್ಧ ದಾಖಲೆಗಳನ್ನು ಹಾಜರುಪಡಿಸುವ ಷರತ್ತುಗಳಿಗೆ ಒಳಪಟ್ಟು ನಿಯಮಬಾಹಿರವಾಗಿ ಮರುಪಾವತಿ ಆದೇಶ ಮಾಡಲಾಗಿತ್ತು ಎಂದು ತಮ್ಮ ಸ್ಪಷ್ಟವಾದ ಹೇಳಿಕೆಯನ್ನು ನೀಡಿದ್ದಾರೆ. ಅದರಂತೆ, ಅವರು ಮುಂದಿನ ತಮ್ಮ ಸಾಕ್ಷಿ ಹೇಳಿಕೆಯಲ್ಲಿ ಶ್ರೀ ಟಿ ಗೋವಿಂದಯ್ಯ, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರವರು ಮಾಡಿದ ಆದೇಶಗಳನ್ನು ಕೂಲಂಕುಶವಾಗಿ ಪರಿಶೀಲಿಸಿ, ಪ್ರಕರಣದ ಮತ್ತೊಬ್ಬ ಆರೋಪಿತರಾದ ಶ್ರೀ ಎ.ಕೆ.ವೈ. ಸೈಯದ್, ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು (ನಿವೃತ್ತ) ಇವರು ಸದರಿ ಆದೇಶಗಳ ಮೇಲೆ ತಮ್ಮ ತಕರಾರುಗಳನ್ನು ಬರೆಯಬೇಕಿತ್ತು. ಆದರೆ ಅವರು ಹಾಗೇ ಮಾಡದೇ ಸದರಿ ಮರುಪಾವತಿ ಆದೇಶಗಳಿಗೆ ತಮ್ಮ ಮೇಲು ರುಜು ಹಾಕಿದ್ದಾರೆ. ಆದ್ದರಿಂದ, ಸದರಿ ಆದೇಶಗಳು ವಾಣಿಜ್ಯ ತೆರಿಗೆ ಇಲಾಖೆಯ ಸುತ್ತೋಲೆಗಳಿಗೆ ವಿರುದ್ಧವಾಗಿವೆ. ಇದಲ್ಲದೇ, ಸರ್ಕಾರದ 1994ರ ಅಧಿಸೂಚನೆಯಲ್ಲಿ ಸೂಚಿಸಲಾದ ಮಾರ್ಗಸೂಚಿಗಳನ್ನು ಸಹ ಅವರು ಅನುಸರಿಸಿರುವುದಿಲ್ಲ. ಕಾರಣ, ದಿನಾಂಕ: 09–08–2010ರಂದು ತಾವು ವಾಣಿಜ್ಯ ತೆರಿಗೆಗಳ ಆಯುಕ್ತರವರಿಗೆ ತಮ್ಮ ವರದಿಗಳನ್ನು ಸಲ್ಲಿಸಿದ್ದು, ಅವುಗಳಲ್ಲಿ ಬರೆದ ವಿಷಯಗಳು ನಿಜ ಮತ್ತು ಸತ್ಯವಾಗಿವೆ ಎಂದು ಸಹ ತಮ್ಮ ಸಾಕ್ಷಿ ಹೇಳಿಕೆಯಲ್ಲಿ ಹೇಳಿದ್ದಾರೆ. ಅದರಂತೆ, ನಿಶಾನೆ ಪಿ–1 ಇದು 1994ರ ಅಧಿಸೂಚನೆ ಎಂದು ಹಾಗೂ ನಿಶಾನೆ ಅ3 ಇದು ಇಲಾಖೆಯ ಸುತ್ತೋಲೆ ಎಂದು ಸಹ ಗುರುತಿಸಿದ್ದಾರೆ. ಈ ಸಾಕ್ಷಿದಾರರ ಹೇಳಿಕೆಯನ್ನು ಪ್ರಾ.ಸಾ. ನಂ.1 ರವರು ಸಮರ್ಥಿಸಿ ತಮ್ಮ ಸಾಕ್ಷಿ ಹೇಳಿಕೆಯನ್ನು ನೀಡಿದ್ದಾರೆ. ಹಾಗೂ ನಿಶಾನೆ ಪಿ–2 ಮತ್ತು ಪಿ–4 ರಿಂದ ಪಿ–15 ರವರೆಗಿನ ದಾಖಲೆಗಳ ಬಗ್ಗೆಯೂ ತಮ್ಮ ಸ್ಪಷ್ಟವಾದ ಸಾಕ್ಷಿ ಹೇಳಿಕೆಯನ್ನು ನೀಡಿದ್ದಾರೆ. ಈ ಮೇಲೆ ನಮೂದಿಸಿರುವ ಆರೋಪಿತರು ಸಾಕ್ಷಿದಾರರ ಹೇಳಿಕೆಗಳನ್ನಾಗಲಿ ಅಥವಾ ಹಾಜರುಪಡಿಸಿದ ಮತ್ತು ಗುರುತಿಸಿಕೊಂಡ ನಿಶಾನೆ ಪಿ–1 ರಿಂದ ಪಿ–18ರವರೆಗಿನ ದಾಖಲೆಗಳನ್ನು ಸಹ ಅವರು ಪ್ರಶ್ನಿಸದೇ ಒಪ್ಪಿಕೊಂಡಿದ್ದಾರೆ.

ಆದ್ದರಿಂದ ಆರೋಪಿತರು ಸಲ್ಲಿಸಿದ ಲಿಖಿತ ಸಂರಕ್ಷಣಾ ಹೇಳಿಕೆಗಳು ಹಾಗೂ ಆಪಾದಿತರ ಪರ ಗುರುತಿಸಿಕೊಂಡಿರುವ ನಿಶಾನೆ ಡಿ–1ರ ದಾಖಲೆಗಳಲ್ಲಿ ಯಾವುದೇ ಸತ್ಯಾಂಶ ಇರುವುದಿಲ್ಲ. ನಿಶಾನೆ ಡಿ–1 ಇದು ದಿನಾಂಕ: 30–05–2006ರ ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಕಾನೂನು ಮತ್ತ ಕಾರ್ಯನೀತಿ)ರವರು ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು (ಆಡಳಿತ) ಡಿ.ವಿ.ಓ–2 ರವರಿಗೆ ಬರೆದ ಪತ್ರವಾಗಿದ್ದು, ಅದು ಕೇವಲ 2005 ಮತ್ತು 2006ನೇ ಸಾಲಿಗೆ ಮಾತ್ರ ಸಂಬಂಧಪಟ್ಟಿದ್ದು ಇರುತ್ತದೆ. ಕಾರಣ ಅನುಬಂಧದಲ್ಲಿನ ಆರೋಪಗಳನ್ನು ಸಮರ್ಥಿಸುವ ಸಂಗತಿಗಳು ಸುಸ್ಪಷ್ಟವಾಗಿ ರುಜುವಾತು ಆಗುತ್ತವೆ. ಅದಲ್ಲದೇ ನಿಶಾನೆ ಪಿ–1 ರಿಂದ ಪಿ–3 ರಲ್ಲಿ ನಿಗದಿಪಡಿಸಿರುವ ಸರ್ಕಾರಿ ಆದೇಶ ಸುತ್ತೋಲೆ ಹಾಗೂ ಕಾನೂನುಗಳ ಬಗ್ಗೆ ಆರೋಪಿತರು ಯಾವುದೇ ಕ್ರಮ ಜರುಗಿಸದೇ ಇರುವುದು ಸಹ ಕಂಡುಬಂದಿರುತ್ತದೆ.

ಮಂಡನಾಧಿಕಾರಿಗಳು ಹಾಜರುಪಡಿಸಿದ ಲಿಖಿತ ವಾದದಲ್ಲಿ ಸಾಕಷ್ಟು ಸತ್ಯಾಂಶಗಳು ಕಂಡು ಬರುತ್ತಿದ್ದು, ಆರೋಪಿತರು ಸಲ್ಲಿಸಿರುವ ಪ್ರತಿವಾದ ಹೇಳಿಕೆಯಲ್ಲಿ ಯಾವುದೇ ಸತ್ಯಾಂಶಗಳು ಮತ್ತು ನೈಜ ಸಂಗತಿಗಳು ವ್ಯಕ್ತವಾಗುವುದಿಲ್ಲ ಈ ಎಲ್ಲಾ ಅಂಶಗಳನ್ನು ಅವಲೋಕಿಸಲಾಗಿ ಅರೋಪಿತರು ತೆರಿಗೆ ಮರುಪಾವತಿ ನೀಡುವಾಗ ಕೇಂದ್ರ ಕಛೇರಿಯಿಂದ ಹೊರಡಿಸಲಾದ ಸುತ್ತೋಲೆಗಳಲ್ಲಿನ ಸೂಚನೆಗಳನ್ನು ಪಾಲಿಸದಿರುವುದು, ಹೂಡುವಳಿ ತೆರಿಗೆಯನ್ನು ವರ್ತಕರು ಪಾವತಿಸಿದ್ದಾರೆಯೇ ಎಂಬುದನ್ನು ಖಚಿತಪಡಿಸಿಕೊಳ್ಳದೇ ತೆರಿಗೆ ಮರುಪಾವತಿ ಮಾಡಿರುವುದು ಹಾಗೂ ಪ್ರಕರಣದಲ್ಲಿ ಪ್ರಕ್ರಿಯೆಗಳನ್ನು ಕೈಗೊಳ್ಳದೇ ಪ್ರಕ್ರಿಯಾ ಲೋಪ ಉಂಟು ಮಾಡಿರುವುದು ಮೂಡಿ ಬಂದಿದೆ. ಆದ್ದರಿಂದ ಪ್ರಕ್ರಿಯಾ ಲೋಪಕ್ಕೆ ಸೀಮಿತಗೊಳಿಸಿ ಆರೋಪ ಸಾಬೀತಾಗಿದೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಿಕೊಂಡು ದಂಡನೆ ವಿಧಿಸಲು ನಿರ್ಣಯಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 49 ವಾತೆತ 2012, ಬೆಂಗಳೂರು, ದಿನಾಂಕ: 22–11–2014**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8 (iv–ಎ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಟಿ. ಗೋವಿಂದಯ್ಯ, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು ಇವರ ವೇತನವನ್ನು ವೇತನ ಶ್ರೇಣಿ 22,800–600–24,400–700–28,800–800–33,600–900–39,000–1,050–43,200 ರಲ್ಲಿ ಪ್ರಸ್ತುತ ಅವರು ಪಡೆಯುತ್ತಿರುವ ರೂ. 39,000/– ಗಳಿಂದ ಎರಡು ಹಂತ ಕೆಳಗೆ ಅಂದರೆ ರೂ. 37,200/–ಕ್ಕೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದವರೆಗೆ ಇಳಿಸುವ ದಂಡನೆಯನ್ನು ವಿಧಿಸಿದೆ.

ಈ ಅವಧಿಯಲ್ಲಿ ಅವರ ವೇತನವು ಸ್ಥಿರವಾಗಿರುತ್ತದೆ. ಈ ದಂಡನೆಯು ಅವರ ಮುಂಬರುವ ವಾರ್ಷಿಕ ವೇತನ ಬಡ್ತಿಗಳನ್ನು ಮುಂದೂಡುವ ಪರಿಣಾಮ ಹೊಂದಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಬಿ. ಅಳವಂಡಿ,**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2 & ಸಮನ್ವಯ)

**P.R. 105**

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಎಲ್. ಜಯರಾಜ್, ಲೆಕ್ಕಾಧೀಕ್ಷಕರು ಇವರು ರಾಜ್ಯ ಲೆಕ್ಕಪತ್ರ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆ–ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1. ಆದೇಶ ಸಂಖ್ಯೆ : ಬೆಂಜಮಂ/ಅಕಾ/ಮುಆಅ–ಕಾ/07–11–08/4540/2008–09, ದಿನಾಂಕ : 26–03–2009.
2. ಜಿ. ರಾಘವೇಂದ್ರರಾವ್, ನಿವೃತ್ತ ನ್ಯಾಯಾಧೀಶರ ವಿಚಾರಣಾ ವರದಿ ದಿನಾಂಕ : 12–09–2012.
3. ನೋಟೀಸ್ ಸಂಖ್ಯೆ : ರಾಲೆಪ 07 ಸಿನೇವಿ 2013/3623, ದಿನಾಂಕ : 25–02–2014.
4. ಎಲ್. ಜಯರಾಜ್, ಲೆಕ್ಕಾಧೀಕ್ಷಕರ ಉತ್ತರ ದಿನಾಂಕ : 03–04–2014.
5. ಪತ್ರದ ಸಂಖ್ಯೆ : ಆಇ 220 ರಾಲೆಪ 2013, ದಿನಾಂಕ : 20–09–2014.
6. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಅವರ ಪತ್ರ ಸಂಖ್ಯೆ : ಪಿಎಸ್‌ಸಿ 173 ಸಿಎನ್‌ಎಸ್ 14, ದಿನಾಂಕ : 04–12–2014.

**ಪ್ರಸ್ತಾವನೆ :**

ಶ್ರೀ ಎಲ್. ಜಯರಾಜ್, ಲೆಕ್ಕಾಧೀಕ್ಷಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರು ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಕಾರ್ಯನಿರ್ವಾಹಕ ಅಭಿಯಂತರರ ಕಛೇರಿ, ಕಾ.ಮು.ಕೆ. ವಿಭಾಗದಲ್ಲಿ **ದಿನಾಂಕ : 19–07–2006 ರಿಂದ 25–08–2008ರವರೆಗೆ** ಕಾರ್ಯನಿರ್ವಹಿಸುತ್ತಿದ್ದಾಗ ಇತರರೊಡನೆ ಷಾಮೀಲಾಗಿ ಚೆಕ್ ಪುಸ್ತಕಗಳ ಸ್ವೀಕೃತಿ ವಹಿ, ನಗದು ಪುಸ್ತಕಗಳ ನಿರ್ವಹಣೆಯನ್ನು ಸರಿಯಾಗಿ ನಿರ್ವಹಿಸದೇ 38 ಸೆಲ್ಫ್ ಚೆಕ್‌ಗಳ ಮೂಲಕ **ರೂ. 49,69,789**/–ಗಳನ್ನು ಎಸ್.ಬಿ.ಎಂ. ಮಳವಳ್ಳಿ ಶಾಖೆಯಿಂದ ನಗದು ಗುಮಾಸ್ತರು ಡ್ರಾ ಮಾಡಿ ದುರುಪಯೋಗ ಪಡಿಸಿಕೊಳ್ಳಲು ಕಾರಣರಾದ : ನೌಕರರ ವೇತನದಿಂದ ಕಟಾವಣೆ ಮಾಡದಿದ್ದರೂ ಸಹ ಆ ಬಾಬ್ತು **ರೂ. 3,73,890**/–ಗಳನ್ನು ವಿಶ್ವೇಶ್ವರಯ್ಯ ಗ್ರಾಮೀಣ ಬ್ಯಾಂಕ್/ಎಸ್.ಬಿ.ಎಮ್./ವಾಸವಿ ಕ್ರೆಡಿಟ್ ಕೋ–ಆಪರೇಟಿವ್ ಬ್ಯಾಂಕ್/ಧನಲಕ್ಷ್ಮಿ ಬ್ಯಾಂಕ್/ಸಿಂಡಿಕೇಟ್ ಬ್ಯಾಂಕ್‌ಗಳಿಗೆ ಮಂಡಳಿ ವತಿಯಿಂದ ಹೆಚ್ಚುವರಿ ಹಣ ಪಾವತಿಸಿ ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ಆರ್ಥಿಕ ನಷ್ಟ ಉಂಟು ಮಾಡಿದ ; ಗುತ್ತಿಗೆದಾರರ ಕಾಮಗಾರಿ ಬಿಲ್‌ಗಳಲ್ಲಿ Incom tax, work contract tax ಹಾಗೂ Royalty ಗಳನ್ನು ಕಟಾಯಿಸದಿದ್ದರೂ ಸಹ ಅವುಗಳ ಬಾಬ್ತು **92,892**/–ಗಳನ್ನು ಸಂಬಂಧಿಸಿದ ಇಲಾಖೆಗಳಿಗೆ ಪಾವತಿ ಮಾಡಿ ಮಂಡಳಿಗೆ ನಷ್ಟ ಉಂಟು ಮಾಡಿದ ; ಲೆಕ್ಕಪತ್ರದ ಸಮರ್ಪಕ ನಿರ್ವಹಣೆ ಮಾಡದೇ **42,26,859**/–ಗಳ ನಷ್ಟಕ್ಕೆ ಕಾರಣರಾದ ಹಾಗೂ ಲೆಕ್ಕಾಧೀಕ್ಷಕರಾಗಿ ಹೊಣೆಗಾರಿಕೆಯ ಕರ್ತವ್ಯ ನಿರ್ವಹಿಸದೇ **ರೂ. 12,09,712**/–ಗಳನ್ನು ದುರುಪಯೋಗ ಪಡಿಸಿಕೊಂಡ ಆರೋಪಗಳಿಗಾಗಿ ಮೇಲೆ (1)ರಲ್ಲಿ ಓದಲಾದ **ದಿನಾಂಕ : 26–03–2009**ರ ಸರ್ಕಾರಿ ಆದೇಶದಲ್ಲಿ ಇತರರೊಡನೆ ಅವರ ವಿರುದ್ಧವೂ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ಜಿ. ರಾಘವೇಂದ್ರರಾವ್, ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಯವರು ಮೇಲೆ (2)ರಲ್ಲಿ ಓದಲಾದ ದಿನಾಂಕ : 12–09–2012ರ ವಿಚಾರಣಾ ವರದಿ ಸಲ್ಲಿಸಿ ಆರೋಪಿತರ ವಿರುದ್ಧ ಆರೋಪಗಳ ಕುರಿತಂತೆ ಈ ಕೆಳಕಂಡ ನಿರ್ಣಯ ನೀಡಿದರು.

ಶ್ರೀ ಎಲ್. ಜಯರಾಜ್, ಲೆಕ್ಕಾಧೀಕ್ಷಕರು, ಈ ಪ್ರಕರಣದಲ್ಲಿ ಮೂರನೇ ಆರೋಪಿಯಾಗಿದ್ದು, ಅವರು ತಮ್ಮ ವಾದದಲ್ಲಿ ಚೆಕ್‌ನಲ್ಲಿ/ಡಿ.ಡಿ.ಯಲ್ಲಿ ನಮೂದಿಸಲಾದ ಮೊತ್ತ ಹಾಗೂ ಅಧ್ಯಕ್ಷರ ಖಾತೆಗೆ ಜಮಾ ಮಾಡಲಾದ ಮೊತ್ತದಲ್ಲಿ ವ್ಯತ್ಯಾಸ ಇರುವುದನ್ನು ಮೊದಲ ಬಾರಿಗೆ ತಾವೇ ಪತ್ತೆ ಹಚ್ಚಿ ಅದನ್ನು ಎಕ್ಸಿಕ್ಯೂಟಿವ್ ಇಂಜಿನಿಯರ್ ಅವರ ಗಮನಕ್ಕೆ ತರಲಾಗಿ ಅವರು ವಿವರವಾದ ಪರಿಶೀಲನೆ ನಡೆಸಿ ಮಂಡಳಿಯ ಸಹಾಯಕ ನಿಯಂತ್ರಕರು, ಲೆಕ್ಕಪತ್ರ ಅವರಿಗೆ ವರದಿ ಸಲ್ಲಿಸಿ ಲೆಕ್ಕಪರಿಶೋಧನಾ ತಂಡವನ್ನು ರಚಿಸುವಂತೆ ಕೋರಿದ್ದಾರೆ. ಈ ಕಾರಣದಿಂದಾಗಿ ತಾವು ಯಾವುದೇ ದುರ್ನಡತೆ ಎಸಗಿಲ್ಲ ಎಂದು

ಪ್ರತಿಪಾದಿಸಿದ್ದಾರೆ. ಆದರೆ ದಾಖಲೆಗಳಲ್ಲಿ ಲಭ್ಯವಿರುವ ಸಾಕ್ಷ್ಯಗಳು ಬೇರೆ ಅಂಶಗಳನ್ನೇ ಸಾಬೀತುಪಡಿಸುತ್ತವೆ. ಇವರ ಅವಧಿಯಲ್ಲಿ ದುರುಪಯೋಗಪಡಿಸಿಕೊಳ್ಳಲ್ಪಟ್ಟ ಮೊತ್ತ **ರೂ. 42,26,859/–** ಆರೋಪಿತರು ಲೆಕ್ಕಪತ್ರಗಳಲ್ಲಿ ವ್ಯತ್ಯಾಸ ಉಂಟಾಗಿರುವುದರ ಬಗ್ಗೆ **2008ರ** ಅಂತ್ಯದಲ್ಲಿ ಎಕ್ಸಿಕ್ಯೂಟಿವ್ ಇಂಜಿನಿಯರ್ ಅವರನ್ನು ಎಚ್ಚರಿಸಿದರು. ಆದರೆ ಅದು ತೀರಾ ತಡವಾಗಿತ್ತು. ಆ ಹೊತ್ತಿಗಾಗಲೇ ನಗದು ಗುಮಾಸ್ತರು ಹಣವನ್ನು ದುರುಪಯೋಗಪಡಿಸಿಕೊಂಡಾಗಿತ್ತು.

ಬೆಂಗಳೂರು ಜಲಮಂಡಳಿಯು ಲೆಕ್ಕಪತ್ರ ಸಂಹಿತೆಯನ್ನು ಅಳವಡಿಸಿಕೊಂಡಿದ್ದು ಲೆಕ್ಕಾಧೀಕ್ಷಕರಾದ ತಾವು ಲೆಕ್ಕಪತ್ರಕ್ಕೆ ಸಂಬಂಧಿಸಿದಂತೆ ಪ್ರಧಾನ ಕೆಲಸಗಳನ್ನು ನಿರ್ವಹಿಸಬೇಕಿರುವುದು, ವೋಚರ್‌ಗಳ ಪರಿಶೀಲನೆ, ತನಗೆ ಸಲ್ಲಿಸಲ್ಪಟ್ಟ ಚೆಕ್‌ನಲ್ಲಿ ನಮೂದಿಸಿರುವ ಮೊತ್ತವು ವೋಚರ್‌ನಲ್ಲಿರುವ, ಕ್ಯಾಶ್ ಬುಕ್‌ನಲ್ಲಿರುವ, ಫಂಡ್ ರಿಜಿಸ್ಟ್ರರ್‌ನಲ್ಲಿರುವ ಹಾಗೂ Suspence register ನಲ್ಲಿರುವ ಮೊತ್ತಕ್ಕೆ ಸರಿಯಾಗಿ ಹೊಂದುವುದನ್ನು ಖಚಿತಪಡಿಸಿಕೊಳ್ಳುವುದು ಸಂಹಿತೆಯ ಕಂಡಿಕೆ 20ರಲ್ಲಿ ತಮಗೆ ನಿಗದಿಪಡಿಸಲ್ಪಟ್ಟ ಕರ್ತವ್ಯವಾಗಿದೆ ಎಂಬುದನ್ನು ಆರೋಪಿಯು ಒಪ್ಪಿಕೊಳ್ಳುತ್ತಾರೆ. ತಾವು ಮೌಖಿಕವಾಗಿ ಕೋರಿದಾಗ್ಯೂ ಸಹ ಲೆಕ್ಕಪತ್ರಗಳ ಹೊಂದಾಣಿಕೆಯನ್ನು ಕ್ಯಾಷಿಯರ್ ಮಾಡಿರಲಿಲ್ಲ, ಆದರೆ ಈ ಬಗ್ಗೆ ತಾನು ಎಕ್ಸಿಕ್ಯೂಟಿವ್ ಇಂಜಿನಿಯರ್ ಅವರ ಗಮನಕ್ಕೆ ಲಿಖಿತವಾಗಿ ತರಲಿಲ್ಲ. ಬ್ಯಾಂಕ್‌ನಿಂದ ತಂದ ಚೆಕ್‌ಬುಕ್‌ಗಳ ವಿವರವನ್ನು ಕ್ಯಾಷಿಯರ್ ತನ್ನ ಗಮನಕ್ಕೆ ತರಲಿಲ್ಲ. ವಿಭಾಗೀಯ ಕಛೇರಿಯೂ ಸಹ ಚೆಕ್‌ಬುಕ್‌ವಹಿಯನ್ನು ನಿರ್ವಹಿಸಿಲ್ಲ. ಪ್ರಧಾನ ಕಛೇರಿಯ ಲೆಕ್ಕಪತ್ರ ವಿಭಾಗದ ಸಹಾಯಕ ನಿಯಂತ್ರಕರು ಲೆಕ್ಕಪತ್ರವು ಹೊಂದಾಣಿಕೆ ಆಗುತ್ತಿಲ್ಲವೆಂಬ ವಾಸ್ತವವನ್ನು ತಮ್ಮ ಗಮನಕ್ಕೆ ತಂದ ನಂತರವಷ್ಟೇ ತಾವು ಈ ಅಂಶಗಳನ್ನು ಪರಿಶೀಲಿಸಿದ್ದಾಗಿ ಆರೋಪಿಯೇ ಒಪ್ಪಿಕೊಳ್ಳುತ್ತಾರೆ.

ಕ್ಯಾಶ್ ಪುಸ್ತಕ ಹಾಗೂ suspence register ಗಳ ಎಲ್ಲಾ ನಮೂದುಗಳ ತಪಾಸಣೆ ನಡೆಸುವುದು ತಮ್ಮ ಕೆಲಸವಲ್ಲ ಎಂದು ಆರೋಪಿತರು ವಾದಿಸಿದ್ದಾರೆ. ಗುತ್ತಿಗೆದಾರರು ಕಾಮಗಾರಿ ಗುತ್ತಿಗೆ ತೆರಿಗೆ ಕುರಿತ 2008ರ ಫೆಬ್ರವರಿ, ಮಾರ್ಚ್ ತಿಂಗಳ ನಮೂದುಗಳನ್ನು ಚೆಕ್ ಮಾಡಲಿಲ್ಲ. ಚೆಕ್‌ನಲ್ಲಿ ನಮೂದಿಸಿದ ಮೊತ್ತವನ್ನು ಆಧರಿಸಿ ಸಸ್ಪೆನ್ಸ್ ರಿಜಿಸ್ಟರ್‌ನಲ್ಲಿ ಕಾಣಿಸಿರುವ ಮೊತ್ತವನ್ನು ಕೇವಲ ಚೆಕ್ ಮಾಡಿದ್ದಾರೆ. ಆದರೆ ಕೆಲಸದ ಒತ್ತಡದಿಂದಾಗಿ ಆ ನಮೂದುಗಳನ್ನು ಕ್ಯಾಶ್‌ಬುಕ್‌ನಲ್ಲಿನ ಉಲ್ಲೇಖ ಆಧರಿಸಿ ಹೊಂದಾಣಿಕೆ ಮಾಡಿಲ್ಲ ಎಂದು ತಿಳಿಸಿರುತ್ತಾರೆ. ತಮ್ಮ ಅವಧಿಯಲ್ಲಿ ಜಲಮಂಡಳಿಯ ರೂ. 41,34,347/– ದುರ್ವಿನಿಯೋಗ ಆಗಿದೆ ಎಂದು ಆರೋಪಿಯು ಒಪ್ಪಿಕೊಳ್ಳುತ್ತರಾದರೂ ಅದಕ್ಕೆ ತಾವು ಹೊಣೆಗಾರರಲ್ಲವೆಂದು ವಾದಿಸುತ್ತಾರೆ. ಜಲಮಂಡಳಿಯ ರೂ. 13 ಲಕ್ಷಗಳನ್ನು ತಾನು ದುರುಪಯೋಗ ಮಾಡಿಕೊಂಡಿರುವುದಾಗಿ ಕ್ಯಾಷಿಯರ್ ಹೇಳಿಕೆ ನೀಡಿ ಅದನ್ನು ಮೂರು ತಿಂಗಳ ಒಳಗಾಗಿ ಪಾವತಿಸುವುದಾಗಿ ಒಪ್ಪಿಕೊಂಡಿದ್ದಾರೆ ಎಂದು ತಿಳಿಸಿದ್ದಾರೆ. ಇದರಿಂದಾಗಿ ದಾಖಲೆಯಲ್ಲಿರುವ ಸಾಕ್ಷಗಳಿಂದಾಗಿ ಆರೋಪಿತರರು ಅವರ ಅವಧಿಯಲ್ಲಿ ಲೆಕ್ಕಾಧೀಕ್ಷಕರಾಗಿ ಲೆಕ್ಕಪತ್ರಗಳ ಪರಿಣಾಮಕಾರಿ ತನಿಖೆಯನ್ನು ಕೈಗೊಳ್ಳದೇ ಇದ್ದ ವಾಸ್ತವಾಂಶ ಮೂಡಿ ಬರುತ್ತದೆ.

ಸಸ್ಪೆನ್ಸ್ ರಿಜಿಸ್ಟರ್‌ನಲ್ಲಿನ ಸುಳ್ಳು ಮೊತ್ತಗಳ ಮೇಲೆ ತನ್ನ ಮುಂದೆ ಮಂಡಿಸಲಾದ ಚೆಕ್‌ಗಳಲ್ಲಿ ನಮೂದಿಸಿದ ಮೊತ್ತವನ್ನು ಮಾತ್ರ ಪರಿಶೀಲಿಸಿದರೇ ಹೊರತು ಚೆಕ್‌ನಲ್ಲಿನ ಮೊತ್ತವನ್ನು ಕ್ಯಾಶ್ ರಿಜಿಸ್ಟರ್‌ನೊಡನೆ ಪರಿಶೀಲಿಸಲಿಲ್ಲ ಇದರಿಂದಾಗಿ ಮಂಡಳಿಯ ಹಣವನ್ನು ಸೆಲ್ಫ್ ಚೆಕ್ ಮೂಲಕ ಡ್ರಾ ಮಾಡಲು ಆ ಮೂಲಕ ಹಣ ದುರುಪಯೋಗಪಡಿಸಿಕೊಳ್ಳಲು ಕ್ಯಾಷಿಯರ್‌ನ ಅನುಕೂಲವಾಯಿತು. ಆದರೆ ಈ ಚೆಕ್‌ಗೆ ಎಕ್ಸಿಕ್ಯೂಟಿವ್ ಇಂಜಿನಿಯರ್ ಸಹಿ ಮಾಡಿದ್ದು, ಸೆಲ್ಫ್ ಚೆಕ್‌ಗಳ ರಿಜಿಸ್ಟರಲ್ಲೂ ನಮೂದಿಸಿದೆ. ತಾವು ಬೆಂಗಳೂರು ಜಲಮಂಡಳಿಯಲ್ಲಿ ನಿಯೋಜನೆ ಮೇಲೆ ಕೆಲಸ ನಿರ್ವಹಿಸಿದ ಅವಧಿಯಲ್ಲಿ ಲೆಕ್ಕ ಸಮನ್ವಯ ತಃಖ್ತೆಯನ್ನು ಕ್ಯಾಷಿಯರ್ ಸಲ್ಲಿಸುತ್ತಿಲ್ಲವೆಂಬ ಅಂಶವನ್ನು ಒಮ್ಮೆಯೂ ಸಹ ಆರೋಪಿತರು ಎಕ್ಸಿಕ್ಯೂಟಿವ್ ಇಂಜಿನಿಯರ್ ಅವರ ಗಮನಕ್ಕೆ ತರಲಿಲ್ಲ. ಇದರಿಂದ ಲೆಕ್ಕಾಧೀಕ್ಷಕರಾಗಿ ತಮ್ಮ ಕರ್ತವ್ಯವನ್ನು ನಿಭಾಯಿಸುವುದರನ್ನು ಆರೋಪಿತರು ವಿಫಲರಾಗಿದ್ದಾರೆ. ಪ್ರಧಾನ ಕಛೇರಿಯ ಲೆಕ್ಕಪತ್ರ ನಿಯಂತ್ರಕರಾದ ರಾಮಯ್ಯ ಅವರು ಲೆಕ್ಕಾಚಾರಗಳಲ್ಲಿನ ಏರುಪೇರುಗಳ ಕುರಿತು ಗಮನ ಸೆಳೆದಾಗಲೇ ಇವರು ವಿವರವನ್ನು ಗಮನಿಸಿದ್ದು ಎಂಬುದು ವಾಸ್ತವಾಂಶವಾಗಿದೆ. ಆದ್ದರಿಂದ ಮಂಡಳಿಗೆ ಉಂಟಾದ ನಷ್ಟಕ್ಕೆ ಇವರು ಕಾರಣರಾಗಿದ್ದಾರೆ ಎಂಬ **1, 2, 3, 5ನೇ** ಆರೋಪಗಳು ಸಾಬೀತಾಗಿವೆ. ಆದರೆ ಇವರೇ ದುರುಪಯೋಗ ಪಡಿಸಿಕೊಂಡಿದ್ದಾರೆ ಎಂಬ 4ನೇ ಆರೋಪ ಸಾಭಿತಾಗಿಲ್ಲ.

ವಿಚಾರಣಾವರದಿಯ ಪ್ರತಿಯೊಡನೆ ಶ್ರೀ ಎಲ್. ಜಯರಾಜ್, ಲೆಕ್ಕಾಧೀಕ್ಷಕರಿಗೆ ಮೇಲೆ (3)ರಲ್ಲಿ ಓದಲಾದ **ದಿನಾಂಕ : 25–02–2014ರ** ನೋಟೀಸ್ ನೀಡಿ ವಿಚಾರಣಾವರದಿಯ ಕುರಿತು ಏನಾದರೂ ಅಹವಾಲು ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಆರೋಪಿತರು ಮೇಲೆ (4)ರಲ್ಲಿ ಓದಲಾದ **ದಿನಾಂಕ : 03–04–2014ರ** ಉತ್ತರ ಸಲ್ಲಿಸಿ ಬೆಂಗಳೂರು ಜಲಮಂಡಳಿಯಲ್ಲಿ ತಾನು ನಿಯೋಜನೆ ಮೇರೆಗೆ ಕಾರ್ಯನಿರ್ವಹಿಸುತ್ತಿದ್ದು, ಕೆಸಿಸ್(ಸಿಸಿಇ) ನಿಯಮಗಳು 1957ರ ನಿಯಮ 15ರನ್ವಯ ಮಂಡಳಿಯು ನನ್ನ ವಿರುದ್ಧ ಇಲಾಖಾ ವಿಚಾರಣೆಯನ್ನು ಹೂಡಲು ಮಾತೃ ಇಲಾಖೆಯಾದ ರಾಜ್ಯ ಲೆಕ್ಕಪತ್ರ ಇಲಾಖೆಯ ಅನುಮತಿ ಪಡೆಯಬೇಕಿತ್ತು. ಆದರೆ ಅನುಮತಿ ಪಡೆದಿರುವುದಿಲ್ಲ ಇದು ನಿಯಮದ ಉಲ್ಲಂಘನೆ ಆಗಿದೆ. ಮಂಡಳಿಯು ನೀಡಿದ ನೋಟೀಸ್‌ಗೆ ತಾನು **ದಿನಾಂಕ : 23–01–2009**ರಂದು ನೀಡಿದ ಉತ್ತರವನ್ನು ಪರಿಗಣಿಸದೇ ವಿಚಾರಣೆಯನ್ನು ಮುಂದುವರಿಸಲಾಗಿದೆ. ಏಕ ವಿಚಾರಣೆಯನ್ನು ಜಂಟಿ ವಿಚಾರಣೆಯನ್ನಾಗಿ ಮಾರ್ಪಡಿಸಿದಂತಾಗಿದೆ.

**ದಿನಾಂಕ : 29–08–2012ರ** ಆದೇಶದ ಪ್ರಕಾರ ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯಿಂದ ತಾನು ವರ್ಗಾವಣೆಗೊಂಡಿದ್ದು **ದಿನಾಂಕ : 01–10–2012** ರಂದು ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಸೇವೆಯಿಂದ ನನ್ನನ್ನು ಬಿಡುಗಡೆ ಮಾಡಿದ್ದರೂ ಸಹ ಮಂಡಳಿಯೇ ವಿಚಾರಣೆಯನ್ನು ಮುಂದುವರಿಸಿದೆ. ಇದು ವ್ಯಾಪ್ತಿಯ ಹೊರಗಿದ್ದು ನಿಯಮ ಬಾಹಿರವಾಗಿದೆ. ಎರಡು ಅಥವಾ ಹೆಚ್ಚಿನ ಸರ್ಕಾರಿ ನೌಕರರು ಭಾಗಿಯಾಗಿರುವ ಪ್ರಕರಣಗಳಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸಲು ಸಿ.ಸಿ.ಎ. ನಿಯಮ 13ರಲ್ಲಿ ಅವಕಾಶವಿದೆ. ಆದರೆ ಸರ್ಕಾರಿ ನೌಕರರು ಹಾಗೂ ಮಂಡಳಿಯ ನೌಕರರನ್ನು ಸೇರಿಸಿ ಜಂಟಿ ಇಲಾಖಾ ವಿಚಾರಣೆ ನಡೆಸಲು ಅವಕಾಶ ಇರುವುದಿಲ್ಲ. ಏಕೆಂದರೆ ನನ್ನನ್ನು ಸೇವೆಯಿಂದ ವಜಾಮಾಡುವ ಅಧಿಕಾರವನ್ನು ಮಂಡಳಿಯು ಹೊಂದಿರುವಿದಿಲ್ಲ. ಇದು ವ್ಯಾಪ್ತಿ ಮೀರಿದ ಪ್ರಾಧಿಕಾರ ಹೂಡಿದ ವಿಚಾರಣೆ ಆಗಿದ್ದು ಇಂತಹ ವಿಚಾರಣೆ ಅನುಸರಿಸಿ ವಿಧಿಸುವ ದಂಡನೆಯು ಕಾನೂನು ಬಾಹಿರವಾಗಿರುತ್ತದೆ. ವಿಚಾರಣಾಧಿಕಾರಿಗಳು ತಮ್ಮ ವರದಿಯಲ್ಲಿ ನನ್ನ ವಿರುದ್ಧ ಮಾಡಲಾದ **1,2,3 ಮತ್ತು 5ನೇ** ಆರೋಪಗಳು ಸಾಭೀತಾಗಿವೆ. ಆದರೆ ಇತರರೊಡನೆ ಷಾಮೀಲಾಗಿ ಹಣದುರ್ಬಳಕೆ ಮಾಡಿರುವ ಆರೋಪ ಸಾಭೀತಾಗಿಲ್ಲವೆಂದು ನಿರ್ಣಯಿಸಿದ್ದಾರೆ. ವಸ್ತು ಸ್ಥಿತಿ ಹೀಗಿರುವಾಗ ಸಿಸಿಎ ನಿಯಮ 8(viii) ರಂತೆ ದಂಡನೆ ವಿಧಿಸುವುದು ಕಾನೂನುಬಾಹಿರವಾಗುತ್ತದೆ. ಮಂಡಳಿಯ ಲೆಕ್ಕ ಸಹಾಯಕರುಗಳನ್ನು ಸಹ ಪಾರ್ಟಿಗಳನ್ನಾಗಿ ಮಾಡಬೇಕೆಂಬ ತಮ್ಮ ಕೋರಿಕೆಯನ್ನು ಜಲಮಂಡಳಿಯು ಪರಿಗಣಿಸಲಿಲ್ಲ. ವಿಚಾರಣಾಧಿಕಾರಿಗಳು ಸಹ ಈ

ಬಗ್ಗೆ ಯಾವ ನಿರ್ಣಯವನ್ನು ನೀಡಲಿಲ್ಲ. ಮುಂದುವರಿದಂತೆ ನಗದು ಗುಮಾಸ್ತರು ಮಂಡಳಿಯ ಹಣವನ್ನು ದುರುಪಯೋಗಪಡಿಸಿಕೊಂಡಿದ್ದು ಕಛೇರಿ ಲೆಕ್ಕದಲ್ಲಿರದೇ ಇರುವ ಚೆಕ್‌ಗಳ ಮೂಲಕ ಬ್ಯಾಂಕಿನಿಯಿಂದ ಹಣ ಡ್ರಾ ಮಾಡಿದ್ದಾರೆ ಎಂದು ವಿಚಾರಣಾಧಿಕಾರಿಗಳು ನಿರ್ಣಯ ನೀಡಿದ್ದಾರೆ. ಹೀಗಾಗಿ ದುರುಪಯೋಗ ಪಡಿಸಲ್ಪಟ್ಟ ಚೆಕ್‌ಗಳು ಕಛೇರಿಯ ಲೆಕ್ಕದಲ್ಲಿ ಇಲ್ಲದೇ ಇರುವ ಕಾರಣ ತಾನು ಅವುಗಳಿಗೆ ಸಹಿಮಾಡುವ ಸಂದರ್ಭವೇ ಇಲ್ಲ. ಆದ್ದರಿಂದ ನನ್ನ ವಿರುದ್ಧ ಆರೋಪ ಸಾಭೀತಾಗಿಲ್ಲವೆಂದು ನಿರ್ಣಯಿಸಿ ಆರೋಪ ಮುಕ್ತರನ್ನಾಗಿಸುವಂತೆ ಕೋರಿದ್ದಾರೆ.

ಆರೋಪಿತರ ಉತ್ತರದಿಂದಾಗಿ ಪ್ರಕರಣವನ್ನು ಮತ್ತೆ ಪರಿಶೀಲಿಸಲಾಗಿದೆ. ಸಿಸಿಎ ನಿಯಮ 15(1)ರನ್ವಯ ರಾಜ್ಯ ಸರ್ಕಾರಿ ನೌಕರ ಸೇವೆಯನ್ನು ಸ್ಥಳೀಯ ಪ್ರಾಧಿಕಾರಕ್ಕೆ ನೀಡಲಾದ ಸಂದರ್ಭಗಳಲ್ಲಿ ಅಂತಹ ಸ್ಥಳೀಯ ಪ್ರಾಧಿಕಾರವು ಆತನ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಅಥವಾ ಆತನನ್ನು ಸೇವೆಯಿಂದ ಅಮಾನತ್ತಿನಲ್ಲಿಡುವ ನೇಮಕಾತಿ ಪ್ರಾಧಿಕಾರದ ಅಧಿಕಾರವನ್ನು ಹೊಂದಿರುತ್ತದೆ. ಈ ಪೂರ್ವಾನುಮತಿಯ ಪ್ರಾವಿಸೋದ ಅನುಷ್ಠಾನವು ಎರವಲು ಸೇವೆಯ ಮೇಲೆ ಪಡೆದ ಪ್ರಾಧಿಕಾರವು ವಿಚಾರಣೆ ಹೂಡಿದ ಅಥವಾ ಅಮಾನತ್ತಿನಲ್ಲಿಟ್ಟ ಆದೇಶದ ಪ್ರತಿಯನ್ನು ಎರವಲು ಕೊಟ್ಟ ಪ್ರಾಧಿಕಾರಕ್ಕೆ ಕಳುಹಿಸಿದಾಗ ಎರವಲು ಕೊಟ್ಟ ಪ್ರಾಧಿಕಾರ ಅಂತಹ ಕ್ರಮವು ಸರಿ ಎನಿಸಿದೆ ಎಂದು ಕಂಡು ಬಂದಲ್ಲಿ ಮುಂದುವರಿಯಲು ಬಿಡಬಹುದು. ಇಲ್ಲದಿದ್ದಲ್ಲಿ ತಕ್ಷಣವೇ ಸದರಿ ಕ್ರಮವನ್ನು ತಳ್ಳಿಹಾಕಿ ಆದೇಶ ಹೊರಡಿಸಬಹುದು. ಅಂತಹ ಸಂದರ್ಭದಲ್ಲಿ ಎರವಲು ಪಡೆದು ಪ್ರಾಧಿಕಾರವು ವಿಚಾರಣೆಯನ್ನು ಮುಂದುವರಿಸಲು ಅವಕಾಶ ಇರುವುದಿಲ್ಲ. ಈ ರೀತಿ ಬೆಳವಣಿಗೆ ಎರವಲು ಕೊಟ್ಟ ಪ್ರಾಧಿಕಾರದಿಂದ ಈ ಪ್ರಕರಣದಲ್ಲಿ ಉಂಟಾಗಿರುವುದಿಲ್ಲ. ಆದ್ದರಿಂದ ಶಿಸ್ತು ಕ್ರಮ ಜರುಗಿಸಲು ಬೆಂಗಳೂರು ಜಲಮಂಡಳಿ ಉಪ ಕ್ರಮಿಸಿರುವುದು ನಿಯಮಾನುಸಾರವೇ ಇದೆ.

ಆರೋಪಿತರು ನೋಟೀಸ್‌ಗೆ ನೀಡಿದ **ದಿನಾಂಕ : 23-01-2009ರ** ಉತ್ತರವನ್ನು ಪರಿಗಣಿಸಿ ಅದು ಸಮರ್ಪಕವಾಗಿಲ್ಲದ ಕಾರಣ ವಿಚಾರಣಾಧಿಕಾರಿಗಳನ್ನು ನೇಮಿಸಿರುವುದು ದಾಖಲೆಗಳಿಂದ ಕಂಡುಬರುತ್ತದೆ. ಹಾಗೆಯೇ ಎರವಲು ಸೇವೆಯ ಮೇಲೆ ಆರೋಪಿತರು ಕಾರ್ಯನಿರ್ವಹಿಸುತ್ತಿರುವ ಮಂಡಳಿಯ ಇತರರ ಸಿಬ್ಬಂದಿಯು ಒಳಗೊಂಡಿರುವ ಈ ಪ್ರಕರಣದಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸಿರುವುದು ಸೂಕ್ತವಾಗಿಯೇ ಇದೆ. ಆರೋಪಿಯು ಉಲ್ಲೇಖಿಸುವ ಸಿಸಿಎ ನಿಯಮ 13ರ ಉಲ್ಲಂಘನೆ ಆಗುವುದಿಲ್ಲ. ಆರೋಪಿತರು ಬೆಂಗಳೂರು ಜಲಮಂಡಳಿಯ ಸೇವೆಯಿಂದ ಹಿಂತಿರುಗಿದ ನಂತರ ವಿಚಾರಣೆ ಮುಂದುವರೆಸಿರುವ ಕುರಿತು ಪರಿಶೀಳಿಸಲಾಗಿ ವಿಚಾರಣೆ ಹೂಡಲ್ಪಟ್ಟ ಪ್ರಾಧಿಕರದ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸರ್ಕಾರಿ ನೌಕರನು ಅನಂತರ ಅಲ್ಲಿಂದ ವರ್ಗಾವಣೆ ಆಗಿ ಹೋದನಂತರವೂ ಸಹ ವಿಚಾರಣೆ ಹೂಡಿದ ಪ್ರಾಧಿಕಾರವೇ ಅದನ್ನು ಮುಂದುವರೆಸಿ ವಿಚಾರಣಾ ವರದಿಯೊಡನೆ ನೇಮಕಾತಿ ಪ್ರಾಧಿಕಾರಕ್ಕೆ ಮುಂದಿನ ಕ್ರಮಕ್ಕಾಗಿ ಕಳುಹಿಸಿಸಲು ಸಿಸಿಎ ನಿಯಮ 11(22ಎ)ರಲ್ಲಿ ಅವಕಾಶವಿದೆ, ಅದರಂತೆ ಆರೋಪಿಗೆ ನೇಮಕಾತಿ ಪ್ರಾಧಿಕಾರವು ಮೇಲೆ (3)ರಲ್ಲಿ ಓದಲಾದ **25-02-2014ರ** ಎರಡನೇ ನೋಟೀಸನ್ನು ನೀಡಿದೆ. ಜಲಮಂಡಳಿಯು ಈ ನೋಟೀಸ್ ನೀಡಿರುವುದಿಲ್ಲ.

ಮುಂದುವರಿದು ಆರೋಪಿತರ ವಿರುದ್ಧ ಸಾಭೀತಾದ ಆರೋಪಗಳ ಕುರಿತು ವಿಚಾರಣಾಧಿಕಾರಿಗಳ ನಿರ್ಣಯದ ಬಗ್ಗೆ ಆರೋಪಿತರ ಅಹವಾಲನ್ನು ಪರಿಶೀಲಿಸಿದಲ್ಲಿ ಅವರು ವಾದಿಸುವಂತೆ ವಿಚಾರಣಾಧಿಕಾರಿಗಳು **1,2,3 ಮತ್ತು 5ನೇ** ಆರೋಪಗಳು ಸಾಭೀತಾಗಿವೆ. ಆದರೆ ಇವರೇ ಇತರರೊಡನೆ ಷಾಮೀಲಾಗಿ ಹಣ ದುರುಪಯೋಗ ಮಾಡಿಕೊಂಡಿದ್ದಾರೆಂಬ ಆರೋಪ ಸಾಭೀತಾಗಿಲ್ಲ. ಆರೋಪಿತರ ಈ ವಾದವನ್ನು ಅವರ ವಿರುದ್ಧ ಇಲಾಖಾ ವಿಚಾರಣೆಯಲ್ಲಿ ಸಾಬೀತಾದ ಆರೋಪಗಳ ಸ್ವರೂಪದೊಡನೆ ಗಮನಿಸಿದಲ್ಲಿ ಆರೋಪಿತರು ತಾನು ನಿರ್ವಹಿಸಬೇಕಾದ ಕರ್ತವ್ಯದೆಡೆಗೆ ತೋರಿದ ನಿರ್ಲಕ್ಷವೇ ಮಂಡಳಿಯ ಹಲವಾರು ಲಕ್ಷ ರೂಪಾಯಿಗಳು ಅನ್ಯರ ಪಾಲಾಗಲು ಕಾರಣವಾಯಿತು. ತಾನು ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಮಂಡಳಿಯ ಹಣಕಾಸಿನ ವ್ಯವಹಾರವನ್ನು ಸುಸಜ್ಜಿತವಾಗಿ ನಡೆಸಬೇಕು ಲೆಕ್ಕ ಪತ್ರಗಳನ್ನು ಕ್ರಮ ಬದ್ಧವಾಗಿ ಕಾಲಕಾಲಕ್ಕೆ ಸಮನ್ವಯಗೊಳಿಸಬೇಕು, ಚೆಕ್‌ಗಳ ರಿಜಿಸ್ಟರ್, ಕ್ಯಾಷ್‌ಬುಕ್, ಇವುಗಳ ಕ್ರಮಬದ್ಧ ನಿರ್ವಹಣೆ ಮಾಡಬೇಕು. ಈ ಕರ್ತವ್ಯವನ್ನು ಮಾಡದೇ ಉಳಿದದ್ದು. ಅಲ್ಲದೇ ತನ್ನ ಅಧೀನದ ನಗದು ಗುಮಾಸ್ತನು ನೀಡಿದ ಚೆಕ್‌ಗಳಲ್ಲಿ ನಮೂದಿಸಿದ ಮೊತ್ತವನ್ನು ಮೇಲಿನ ರಿಜಿಸ್ಟರ್‌ಗಳೊಡನೆ ಹೋಲಿಸಿ ನೋಡದೇ ಕಣ್ಣುಮುಚ್ಚಿ ಚೆಕ್‌ಗಳನ್ನು ಸಹಿಗೆ ಶಿಫಾರಸ್ಸ ಮಾಡಿರುವುದು, ಚೆಕ್‌ಗಳ ರಿಜಿಸ್ಟರ್ ನಿರ್ವಹಣೆ ಮಾಡದೇ ಚೆಕ್‌ಗಳ ವಿವರವು ದೊರೆಯದ ಸನ್ನಿವೇಶ ಸೃಷ್ಟಿಸಿ ಆ ಸನ್ನಿವೇಶದ ದುರ್ಲಾಭ ಪಡೆದು ಮಂಡಳಿಯ ಲಕ್ಷಾಂತರ ರೂ.ಗಳನ್ನು ಸೆಲ್ಫ್ ಚೆಕ್ ಮೂಲಕ ಪಡೆಯಲು ನಗರದು ಗುಮಾಸ್ತನಿಗೆ ಅನುವು ಮಾಡಿಕೊಟ್ಟಿರುವುದು ದುರುಪಯೋಗದಲ್ಲಿ ಪಾಲುದಾರರಾದಷ್ಟೇ ತೀವ್ರವಾದ ಹಾಗೂ ಕ್ರಿಮಿನಲ್ ಸ್ವರೂಪದ ದುರ್ನಡತೆ ಆಗಿರುತ್ತದೆ.

ಆರೋಪಿತರು ಒಂದು ವೇಳೆ ಅವರ ಕರ್ತವ್ಯವಾದ ನಗದು ಪುಸ್ತಕಗಳ ನಿರ್ವಹಣೆ, ಚೆಕ್ ರಿಜಿಸ್ಟರ್‌ನ ಕಾಲಕಾಲಿಕ ತಪಾಸಣೆ, ನಗದು ವಿಭಾಗದ ಲೆಕ್ಕಪತ್ರ ಸಮನ್ವಯ ಹಾಗೂ ಈ ಎಲ್ಲವುಗಳೊಡನೆ Suspence register ದಾಖಲುಗಳೊಡನೆ ಆಗಿಂದಾಗ್ಗೆ ಉಸ್ತುವಾರಿ ವಹಿಸಿ ತನ್ನ ಹಂತದಲ್ಲಿ ಸರಿಪಡಿಸಬಹುದಾದ್ದನ್ನು ಸರಿಪಡಿಸಿ, ತನಗೆ ಮೀರಿದ್ದನ್ನು ಸಕಾಲದಲ್ಲಿ ಮೇಲಾಧಿಕಾರಿಗಳ ಗಮನಕ್ಕೆ ತಂದು ಸೂಕ್ತ ಪರಿಪಡಿಕೆ ಕ್ರಮವನ್ನು ತೆಗೆದುಕೊಂಡಿದ್ದಲ್ಲಿ ಈ ರೀತಿಯ ಲಕ್ಷಾಂತರ ರೂ.ಗಳ ಅಕ್ರಮ ಸೆಳೆತ, ದುರುಪಯೋಗ ಇವುಗಳು ಇವರ ಮೂಗಿನಡಿಯಲ್ಲಿಯೇ ನಡೆಯಲು ಅವಕಾಶವೇ ಆಗುತ್ತಿರಲಿಲ್ಲ. ಆರೋಪಿತರು ತನ್ನ ಕರ್ತವ್ಯದಲ್ಲಿ ವಿಫಲರಾದ ಕಾರಣ ಲಕ್ಷಾಂತರ ರೂ.ಗಳು ಅಕ್ರಮವಾಗಿ ಸೆಳೆಯಲ್ಪಟ್ಟು ದುರುಪಯೋಗವಾಗಿವೆ. ವಿಚಾರಣೆಯಲ್ಲಿ ಹೆಸರಿಸಲಾದ ಸಾಕ್ಷಿಗಳು ನೀಡಿದ ಸಾಕ್ಷ್ಯ ಹಾಗೂ ಹಾಜರುಪಡಿಸಿದ ದಾಖಲೆಗಳು ಆರೋಪಗಳನ್ನು ಸಾಬೀತುಪಡಿಸಲು ಸಮರ್ಪಕವಾಗಿರುವಾಗ ಕೇವಲ ಆರೋಪಿತರು ಕೋರಿದರೆಂಬು ಕಾರಣಕ್ಕೆ ಲೆಕ್ಕ ಸಹಾಯಕರುಗಳನ್ನು ಪಕ್ಷಕಾರನ್ನಾಗಿ ಮಾಡುವ ಅವಶ್ಯಕತೆ ಬರುವುದಿಲ್ಲ. ಹಾಗೆಯೇ 2ನೇ ಕಾರಣ ಕೇಳುವ ನೋಟೀಸ್‌ನೊಡನೆ ಜಲಮಂಡಳಿಯ ನಿರ್ಣಯವನ್ನು ಲಗತ್ತಿಸಿದರ ಉದ್ದೇಶ ಆಗಾಗ್ಗಿನ ಬೆಳವಣಿಗೆ ಕುರಿತು ಮಾಹಿತಿಗಾಗಿಯೇ ಹೊರತು ಪೂರ್ವನಿರ್ಧಾರಿತ ತಿಳುವಳಿಕೆ ಅಲ್ಲ. ದಂಡನೆ ವಿಧಿಸುವ ಅಥವಾ ಬಿಡುವ ತೀರ್ಮಾನವನ್ನು ಹಾಗೂ ದಂಡನೆಯ ಸ್ವರೂಪವನ್ನು ಆರೋಪಿತರು 2ನೇ ನೋಟೀಸ್‌ಗೆ ನೀಡಿದ ಉತ್ತರವನ್ನು ಪರಿಶೀಲಿಸಿದ ನಂತರವೇ ತೀರ್ಮಾನಿಸಲಾಗುತ್ತದೆ.

ಕಛೇರಿಯ ಲೆಕ್ಕದಲ್ಲಿ ಇಲ್ಲದೇ ಇರುವ ಚೆಕ್‌ಗಳನ್ನು ಬಳಸಿ ನಗದು ಗುಮಾಸ್ತರು ಮಂಡಳಿಯ ಹಣ ಸೆಳೆದು ದುರುಪಯೋಗಪಡಿಸಿಕೊಂಡಿದ್ದಾರೆ ಎಂದು ವಿಚಾರಣಾಧಿಕಾರಿಗಳು ನಿರ್ಣಯ ನೀಡಿದ್ದು, ಇದರಿಂದಾಗಿ ಸದರಿ ಚೆಕ್‌ಗಳು ಕಛೇರಿಯ ಲೆಕ್ಕದಲ್ಲಿ ಇಲ್ಲದೇ ಇರುವುದರಿಂದ ತಾನು ಇವುಗಳಿಗೆ ಸಹಿಮಾಡುವ ಸಂದರ್ಭ ಬರುವುದಿಲ್ಲವೆಂಬ ಅಂಶವನ್ನು ವಿಚಾರಣಾಧಿಕಾರಿಗಳು ಪರಿಗಣಿಸಿರುವುದಿಲ್ಲ. ಪರಿಗಣಿಸಿದ್ದಲ್ಲಿ ನನ್ನ ವಿರುದ್ಧ ಆರೋಪ ಸಾಭೀತಾಗಿಲ್ಲ ಎಂಬ ನಿರ್ಣಯ ನೀಡಬೇಕಿತ್ತು. ಆದ್ದರಿಂದ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಿಕೊಳ್ಳದೇ ತಮ್ಮನ್ನು ಆರೋಪ ಮುಕ್ತರನ್ನಾಗಿಸುವಂತೆ

ಕೋರಿದ್ದಾರೆ. ಈ ಅಂಶವನ್ನು ಪರಿಶೀಲಿಸಲಾಗಿ ಚೆಕ್ ಪುಸ್ತಕಗಳ ರಿಜಿಸ್ಟರ್ ನಿರ್ವಹಣೆ ಮಾಡಿ ಬ್ಯಾಂಕ್‌ನಿಂದ ತಂದ ಚೆಕ್‌ಗಳ ವಿವರವನ್ನು ಅದರಲ್ಲಿ ನಮೂದಿಸುವ ಹಾಗೂ ಅವುಗಳ ವಿಲೇವಾರಿಯನ್ನು ಆ ರಿಜಿಸ್ಟರ್‌ರಲ್ಲಿ ನಮೂದಿಸುವ ಹೊಣೆಗಾರಿಕೆಯನ್ನು ಆರೋಪಿತರು ನಿರ್ವಹಿಸಿಲ್ಲವೆಂಬುದು ವಿಚಾರಣೆಯಲ್ಲಿ ಮೂಡಿ ಬಂದಿದೆ. ಅಲ್ಲದೇ ಚೆಕ್‌ನಲ್ಲಿ ನಮೂದಿಸಿದ ಮೊತ್ತವನ್ನು ಸಸ್ಪೆನ್ಸ್ ರಿಜಿಸ್ಟರ್‌ನೊಡನೆ ಕೇವಲ ಚೆಕ್ ಮಾಡಿದ್ದು, ಸಸ್ಪೆನ್ಸ್ ರಿಜಿಸ್ಟರ್‌ನ ನಮೂದುಗಳನ್ನು ಕ್ಯಾಶ್ ಬುಕ್‌ನೊಡನೆ ಹೋಲಿಕೆ ಮಾಡಿಲ್ಲವೆಂದು ಆರೋಪಿತರೇ ವಿಚಾರಣಾಧಿಕಾರಿಗಳ ಮುಂದೆ ಒಪ್ಪಿಕೊಂಡಿದ್ದಾರೆ.

ಒಂದು ವೇಳೆ ಆರೋಪಿತರು ತಮಗೆ ಶಾಸನ ಬದ್ಧವಾಗಿ ವಹಿಸಲಾದ ಹೊಣೆಗಾರಿಕೆಯನ್ನು ನಿರ್ವಹಿಸುವುದರೊಡನೆ ಚೆಕ್ ಪುಸ್ತಕಗಳ ವಹಿಯನ್ನು ನಿರ್ವಹಿಸಿ, ಅದರಲ್ಲಿ ಬ್ಯಾಂಕ್‌ನಿಂದ ಪಡೆದುಕೊಂಡು ಬಂದ ಚೆಕ್‌ಗಳ ಸಂಪೂರ್ಣ ವಿವರ, ಪ್ರತಿ ಚೆಕ್ ನೀಡಿದಾಗ ಅದರ ಮೊತ್ತ ನೀಡಲ್ಪಟ್ಟ ವ್ಯಕ್ತಿ, ಚೆಕ್‌ನ ಸ್ವರೂಪ ಇವುಗಳ ದೈನಂದಿನ ಆಧಾರದ ಮೇಲೆ ನಿರ್ವಹಣೆ ಮಾಡಿದ್ದಲ್ಲಿ ಅಥವಾ ಅದರ ಉಸ್ತುವಾರಿ, ತಪಾಸಣೆ ಕಾಲಕಾಲಕ್ಕೆ ಕೈಗೊಂಡಿದ್ದಲ್ಲಿ ಹಣಕಾಸಿನ ಮೇಲೆ ಸಹಜವಾಗಿಯೇ ನಿಯಂತ್ರಣ ಇರುತ್ತಿತ್ತು. ಆಗ ಸ್ವೇಚ್ಛೆಯಿಂದ ಲಕ್ಷಾಂತರ ರೂ.ಗಳನ್ನು ಸೆಲ್ಫ್ ಚೆಕ್‌ಮೂಲಕ ಡ್ರಾ ಮಾಡಲು ನಗದು ಗುಮಾಸ್ತರಿಗೆ ಅವಕಾಶ ಸಿಗುತ್ತಿರಲಿಲ್ಲ. ಅದನ್ನು ಆರೋಪಿತರು ನಿರ್ವಹಿಸದೇ ಇದ್ದ ಕಾರಣ ಮಂಡಳಿಗೆ ಬ್ಯಾಂಕ್‌ನಿಂದ ತಂದ ಚೆಕ್‌ಗಳ ವಿವರವು ಚೆಕ್ ಪುಸ್ತಕದ ವಹಿಯಲ್ಲಿ ನಮೂದಾಗದೇ ಮಂಡಳಿಯ ಲೆಕ್ಕಕ್ಕೆ ಸಿಗಲಿಲ್ಲ. ಇಂತಹಾ ಸನ್ನಿವೇಶದ ದುರ್ಲಾಭ ಪಡೆದು ನಗದು ಗುಮಾಸ್ತರು ಸೆಲ್ಫ್ ಚೆಕ್ ಮೂಲಕ ಗೊತ್ತು ಗುರಿ ಇಲ್ಲವೇ ಮಂಡಳಿಯ ಹಣವನ್ನು ಡ್ರಾ ಮಾಡಿ ಲಪಟಾಯಿಸಿ ಮಂಡಳಿಗೆ ವಂಚಿಸಲು ದಾರಿಯಾಯಿತು. ಆರೋಗಪಿತರ ಈ ಹೊಣೆಗೇಡಿತನದಿಂದಾಗಿ ಚೆಕ್‌ಗಳು ಮಂಡಳಿಯ ಲೆಕ್ಕಕ್ಕೆ ಸಿಗದ ಹಾಗೂ ಆ ಚೆಕ್‌ಗಳ ಮೂಲಕವೇ ಮಂಡಳಿಯ ಲಕ್ಷಾಂತರ ರೂ.ಗಳು ಲೂಟಿ ಆಗಿರುವಾಗ ಚೆಕ್‌ಗಳು ಮಂಡಳಿಯ ಲೆಕ್ಕಕ್ಕೆ ಸಿಗದ ಕಾರಣ ತನ್ನ ಜವಾಬ್ದಾರಿ ಇಲ್ಲವೆಂದೂ ತನ್ನನ್ನು ಆರೋಪ ಮುಕ್ತರನ್ನಾಗಿಸಬೇಕೆಂದು ಕೋರುವುದು ಸರ್ಕಾರಿ ನೌಕರನಿಗೆ ತಕ್ಕದ್ದಲ್ಲದ ದುರ್ನಡತೆ ಆಗುತ್ತದೆ. ಆದ್ದರಿಂದ ಅಕ್ರಮವಾಗಿ ಲಕ್ಷಾಂತರ ರೂಪಾಯಿಗಳನ್ನು ಸೆಳೆದು ದುರುಪಯೋಗಪಡಿಸಿಕೊಂಡದ್ದು, ಎಷ್ಟು ಅಪರಾದವೋ ಅದಕ್ಕೆ ಅವಕಾಶ ಮಾಡಿಕೊಟ್ಟಿದ್ದು ಅಷ್ಟೆ ಅಪರಾಧ. ಆದ್ದರಿಂದ ಆರೋಪಿತರ ವಾದವನ್ನು ಒಪ್ಪಿಕೊಳ್ಳದೇ ಆರೋಪಿಯಿಂದ ತೀವ್ರ ದುರ್ನಡತೆ ಉಂಟಾಗಿದೆ, ಆ ದುರ್ನಡತೆಯಿಂದಾಗಿ ಮಂಡಳಿಯ 42 ಲಕ್ಷ ರೂ.ಗಳಿಗೂ ಹೆಚ್ಚಿನ ಮೊತ್ತ ನಷ್ಟ ಉಂಟಾಗಿದೆ. **1,2,3,5ನೇ** ಆರೋಪಗಳು ಸಾಬೀತಾಗಿವೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಿಕೊಂಡ ಸರ್ಕಾರವು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯೊಡನೆ ದಂಡನೆ ವಿಧಿಸಲು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 220 ರಾಲೆಪ 2013, ಬೆಂಗಳೂರು, ದಿನಾಂಕ : 02–01–2015**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ & ಮೇಲ್ಮನವಿ) ನಿಯಮಗಳು, 1957ರ ನಿಯಮ **11, 11ಎ** ರೊಡನೆ ಓದಿಕೊಂಡಂತೆ ಅದೇ ನಿಯಮಾವಳಿಯ ನಿಯಮ 8(viii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿದ ಸರ್ಕಾರವು ಶ್ರೀ ಎಲ್. ಜಯರಾಜ್, ಲೆಕ್ಕಾಧೀಕ್ಷಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರನ್ನು ಈ ಮೂಲಕ ಸೇವೆಯಿಂದ ವಜಾಗೊಳಿಸುತ್ತದೆ.

ಶ್ರೀ ಎಲ್. ಜಯರಾಜ್, ಅವರ ದುರ್ನಡತೆಯಿಂದ ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ಉಂಟಾದ ಒಟ್ಟು ನಷ್ಟದ ಪೈಕಿ ಅವರ ಪಾಲು **ರೂ. 5,58,831/–** (ಐದು ಲಕ್ಷ ಐವತ್ತೆಂಟು ಸಾವಿರದ ಎಂಟುನೂರಮೂವತ್ತೊಂದು ರೂಪಾಯಿಗಳು ಮಾತ್ರ)ಗಳನ್ನು ಅವರ ವಿರುದ್ಧ ಸಿವಿಲ್ ಮೊಕದ್ದಮೆ ಹೂಡುವ ಮೂಲಕ ವಸೂಲು ಮಾಡಲು ಮಂಡಳಿಯು ಕ್ರಮ ಕೈಗೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**P.R. 57**

**ಎನ್. ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಆನಂದರಾಜ್, ಸರ್ಕಾರದ ಅಧೀನ ಕಾರ್ಯದರ್ಶಿ ಮತ್ತು ಶ್ರೀ ಚಿಕ್ಕರಂಗೇಗೌಡ, ಶಾಖಾಧಿಕಾರಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರುಗಳ ವಿರುದ್ಧದ ಜಂಟಿ ಇಲಾಖಾ ವಿಚಾರಣೆ–ಮಂಡನಾಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 4 ಸೇಇವಿ 2014, ದಿನಾಂಕ : 11–12–2014.
2. ಅನಧಿಕೃತ ಟಿಪ್ಪಣಿ ಸಂಖ್ಯೆ : ಕಂಇ 241 ಎಲ್‌ಸಿಐ 2014, ದಿನಾಂಕ : 26–12–2014.

**ಪ್ರಸ್ತಾವನೆ :**

ಶ್ರೀ ಆನಂದರಾಜ್, ಸರ್ಕಾರದ ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಕಾನೂನು ಕೋಶ) ಮತ್ತು ಶ್ರೀ ಚಿಕ್ಕರಂಗೇಗೌಡ, ಶಾಖಾಧಿಕಾರಿ, ನಿಯೋಜನೆ ಮೇಲೆ ತಹಶೀಲ್ದಾರ್ (ಗ್ರೇಡ್–2) ಇವರುಗಳು ಈ ಹಿಂದೆ ಕಂದಾಯ ಇಲಾಖೆ (ಎಲ್‌ಎಸಿ) ಶಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದ್ದಾನ್ನಲಾಗಿರುವ ಕರ್ತವ್ಯಲೋಪಗಳ ಬಗ್ಗೆ ಜಂಟಿ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದನ್ವಯ ಶ್ರೀ ಹೆಚ್.ಸಿ. ದೇವೇಂದ್ರಯ್ಯ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಮನೆ ಸಂಖ್ಯೆ : 122, 22ನೇ ಕ್ರಾಸ್, ಜ್ಯುಡಿಷಿಯಲ್ ಲೇಔಟ್, ಜಿ.ಕೆ.ವಿ.ಕೆ. ಪೋಸ್ಟ್, ಯಲಹಂಕ, ಬೆಂಗಳೂರು–560065 ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಕ.ನಾ.ಸೇ. (ಸಿ.ಸಿ.ಎ.) ನಿಯಮಾವಳಿಗಳು 1957ರ ನಿಯಮ 11(5)(ಸಿ)ರನ್ವಯ ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ.ಸ್ವಾಪ್ರ) ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಲಾಗಿರುತ್ತದೆ.

ಕಂದಾಯ ಇಲಾಖೆಯು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಅನಧಿಕೃತ ಟಿಪ್ಪಣಿಯಲ್ಲಿ ಕಂದಾಯ ಇಲಾಖೆಯಲ್ಲಿ ಸರ್ಕಾರದ ಅಧೀನ ಕಾರ್ಯದರ್ಶಿ, (ಭೂಸ್ವಾಪ್ರ) ಎಂಬ ಹುದ್ದೆ ಇಲ್ಲದಿರುವುದರಿಂದ ಕಂದಾಯ ಇಲಾಖೆಯಲ್ಲಿನ ಸರ್ಕಾರದ ಅಧೀನ ಕಾರ್ಯದರ್ಶಿ, (ಭೂಸ್ವಾಧೀನ 1 ಮತ್ತು 3) ಹಾಗೂ ಸರ್ಕಾರದ ಅಧೀನ ಕಾರ್ಯದರ್ಶಿ, (ಭೂಸ್ವಾಧೀನ 2 ಮತ್ತು ಪುನರ್ವಸತಿ) ಇವರುಗಳ ಪೈಕಿ ಯಾರಾದರೂ ಒಬ್ಬರನ್ನು ಗುರುತಿಸಿ, ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸುವಂತೆ ಕೋರಿರುತ್ತಾರೆ.

ಈ ಬಗ್ಗೆ ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 4 ಸೇಇವಿ 2014, ಬೆಂಗಳೂರು, ದಿನಾಂಕ : 6ನೇ ಜನವರಿ, 2015.**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಕಾರಣಗಳಿಂದಾಗಿ ಶ್ರೀ ಆನಂದರಾಜ್, ಸರ್ಕಾರದ ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಕಾನೂನು ಕೋಶ) ಮತ್ತು ಶ್ರೀ ಚಿಕ್ಕರಂಗೇಗೌಡ, ಶಾಖಾಧಿಕಾರಿ, ನಿಯೋಜನೆ ಮೇಲೆ ತಹಶೀಲ್ದಾರ್ (ಗ್ರೇಡ್–2) ಇವರುಗಳು ಈ ಹಿಂದೆ ಕಂದಾಯ ಇಲಾಖೆಯ ಎಲ್.ಎ.ಸಿ. ಶಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದ್ದರೆನ್ನಲಾಗಿರುವ ಕರ್ತವ್ಯಲೋಪಗಳ ಬಗ್ಗೆ ಜಂಟಿ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 4 ಸೇಇವಿ 2014, ದಿನಾಂಕ : 11–12–2014ರಲ್ಲಿ ಕ.ನಾಸೇ. (ಸಿಸಿಎ) ನಿಯಮಾವಳಿಗಳು 1957ರ ನಿಯಮ 11(5)(ಸಿ) ರನ್ವಯ ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ.ಸ್ವಾ.ಪ್ರ) ಇವರನ್ನು **ಮಂಡನಾಧಿಕಾರಿಯನ್ನಾಗಿ** ನೇಮಕ ಮಾಡಿ ಆದೇಶಿಸಿರುವುದನ್ನು ರದ್ದುಪಡಿಸಿ, ಇದೇ ನಿಯಮಾವಳಿಗಳನ್ವಯ ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸ್ವಾಧೀನ 2 ಮತ್ತು ಪುನರ್ವಸತಿ) ಇವರನ್ನು **ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.**

ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 4 ಸೇಇವಿ 2014, ದಿನಾಂಕ : 11–12–2014ರಲ್ಲಿ ವಿಚಾರಣಾಧಿಕಾರಿಯಾಗಿ ನೇಮಿಸಿ ಆದೇಶಿಸಲಾದ ಶ್ರೀ ಹೆಚ್.ಪಿ. ದೇವೇಂದ್ರಯ್ಯ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಮನೆ ಸಂಖ್ಯೆ : 122, 22ನೇ ಕ್ರಾಸ್, ಜ್ಯುಡಿಷಿಯಲ್ ಲೇಔಟ್, ಜಿ.ಕೆ.ವಿ.ಕೆ. ಪೋಸ್ಟ್, ಯಲಹಂಕ, ಬೆಂಗಳೂರು–560065 ಇವರೇ ವಿಚಾರಣಾಧಿಕಾರಿಯಾಗಿ ಮುಂದುವರಿಯುತ್ತಾರೆ.

ವಿಚಾರಣಾಧಿಕಾರಿಯವರಿಗೆ ಸೂಕ್ತ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿ ಒದಗಿಸಲು ಸರ್ಕಾರದ ಅಧೀನ ಕಾರ್ಯದರ್ಶಿ, (ಭೂಸ್ವಾಧೀನ 2 ಮತ್ತು ಪುನರ್ವಸತಿ), ಕಂದಾಯ ಇಲಾಖೆ ಇವರು ಕ್ರಮ ಕೈಗೊಳ್ಳತಕ್ಕದ್ದು.

ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯವರು ನಿಯಮಾನುಸಾರ ಸಂಚಿತ ಸಂಭಾವನೆಯನ್ನು ಹಾಗೂ ಮಂಡನಾಧಿಕಾರಿಯವರು ನಿಯಮಾನುಸಾರ ದಿನಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಆರೋಪಗಳ ವಿಚಾರಣೆಯನ್ನು ನಡೆಸಿ ಆರೋಪ ಸಾಬೀತಾಗಿರುವ ಅಥವಾ ಸಾಬೀತಾಗದೇ ಇರುವ ಬಗ್ಗೆ ಸ್ಪಷ್ಟ ಅಭಿಪ್ರಾಯಗಳನ್ನು ಒಳಗೊಂಡ ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರಿಯಾದ ಸರ್ಕಾರಕ್ಕೆ 3 ತಿಂಗಳುಗಳ ಒಳಗಾಗಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–6).

**P.R. 58**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಜಂಟಿ ಇಲಾಖಾ ವಿಚಾರಣೆಗಳ ಪ್ರಕರಣಗಳಲ್ಲಿ ವಿಚಾರಣಾಧಿಕಾರಿಗಳಾಗಿ ನೇಮಕವಾಗುವ ನಿವೃತ್ತ ಜಿಲ್ಲಾ ನ್ಯಾಯಾಧೀಶರಿಗೆ ಹೆಚ್ಚಿನ ಸಂಭಾವನೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 3 ಸೇಇವಿ 1996, ದಿನಾಂಕ : 24–4–1998.
2. ಸರ್ಕಾರ ಆದೇಶ ಸಂಖ್ಯೆ : ಸಿಆಸುಇ 6 ಸೇಇವಿ 2011, ದಿನಾಂಕ : 28–04–2011.

**ಪ್ರಸ್ತಾವನೆ :**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರನ್ವಯ ಸರ್ಕಾರಿ ನೌಕರರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳಾಗಿ, ಮೇಲೆ (1)ರಲ್ಲಿ ಓದಲಾದ ದಿನಾಂಕ : 24–4–1998ರ ಸರ್ಕಾರಿ ಆದೇಶದನ್ವಯ ನೇಮಿಸಿಕೊಳ್ಳಬಹುದಾಗಿದೆ. ಈ ರೀತಿ ವಿಚಾರಣಾಧಿಕಾರಿಯಾಗಿ ನೇಮಕವಾಗುವ ನಿವೃತ್ತ ಜಿಲ್ಲಾ ನ್ಯಾಯಾಧೀಶರಿಗೆ ನೀಡುವ ಸಂಚಿತ ಸಂಭಾವನೆಯನ್ನು ಉಲ್ಲೇಖ(2)ರಲ್ಲಿ ಓದಲಾದ ದಿನಾಂಕ : 28–04–2011ರ ಸರ್ಕಾರಿ ಆದೇಶದಲ್ಲಿ ಪ್ರತಿ ವಿಚಾರಣೆಗೆ ವಾಹನಭತ್ಯೆಯು ಸೇರಿದಂತೆ, ರೂ. 15000/– (ಹದಿನೈದು ಸಾವಿರ ರೂಪಾಯಿಗಳು) ನಿಗದಿಪಡಿಸಲಾಗಿದೆ.

ಇತ್ತೀಚಿನ ದಿನಗಳಲ್ಲಿ ಜಂಟಿ ಇಲಾಖಾ ವಿಚಾರಣಾ ಪ್ರಕರಣಗಳಲ್ಲಿ ವಿಚಾರಣಾಧಿಕಾರಿಗಳಾಗಿ ನೇಮಕಗೊಳ್ಳುವ ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಸರ್ಕಾರವು ನಿಗದಿಪಡಿಸಿದ ಸಂಭಾವನೆ ರೂ. 15000/–ಗಳನ್ನು ಪರಿಷ್ಕರಿಸುವಂತೆ ಕೋರುತ್ತಿರುವುದು ಮತ್ತು ಆರೋಪಿಗಳ ಸಂಖ್ಯೆ ಪ್ರಕರಣದ ಗಹನತೆ ಇತ್ಯಾದಿಗಳನ್ನು ಉಲ್ಲೇಖಿಸಿ, ಹೆಚ್ಚಿನ ದರದಲ್ಲಿ ಸಂಭಾವನೆ ಪಾವತಿಸುವ ಕುರಿತು ಸರ್ಕಾರದ ವಿವಿಧ ಇಲಾಖೆಗಳಿಂದ ಕೋರಿಕೆಗಳು ಹೆಚ್ಚಿನ ಪ್ರಮಾಣದಲ್ಲಿ ಸ್ವೀಕೃತವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.

ಏಕವ್ಯಕ್ತಿ ಆರೋಪಿತರಾಗಿರುವ ಪ್ರಕರಣದಲ್ಲಿನ ವಿಚಾರಣೆ ಮತ್ತು ಜಂಟಿ ಇಲಾಖಾ ವಿಚಾರಣಾ ಪ್ರಕರಣದಲ್ಲಿನ ಪ್ರಕ್ರಿಯೆ ಒಂದೇ ತರಹದ್ದಾಗಿರುತ್ತದೆ. ಆದರೆ, ಜಂಟಿ ಇಲಾಖಾ ಪ್ರಕರಣಗಳಲ್ಲಿ ಆಪಾದಿತ ಅಧಿಕಾರಿ/ನೌಕರರ ಸಂಖ್ಯೆ ಪರಿಶೀಲಿಸಬೇಕಾದ ದಸ್ತಾವೇಜುಗಳು ಮತ್ತು ಸಾಕ್ಷಿಗಳ

ಪ್ರಮಾಣಕ್ಕೆ ಅನುಗುಣವಾಗಿ ವಿಚಾರಣಾಧಿಕಾರಿಗಳು ಹೆಚ್ಚಿನ ವೆಚ್ಚ, ಸಮಯ ವ್ಯಯಿಸಬೇಕಾಗುತ್ತದೆ ಮತ್ತು ಪರಿಶ್ರಮ ಹೆಚ್ಚಾಗುತ್ತದೆಯೆಂಬ ಅಂಶಗಳನ್ನು ಪರಿಗಣಿಸಿ, ಇಂತಹ ಪ್ರರಣಗಳಲ್ಲಿ ಸಂಭಾವನೆಯನ್ನು ಹೆಚ್ಚಿಸುವ ಬಗ್ಗೆ ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 45 ಸೇಇವಿ 2014, ದಿನಾಂಕ : 08-01-2015.**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರಡಿ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿಗಳಾಗಿ ನೇಮಕವಾಗುವ ನಿವೃತ್ತ ಜಿಲ್ಲಾ ನ್ಯಾಯಾಧೀಶರಿಗೆ ಈಗಾಗಲೇ ದಿನಾಂಕ : 28-04-2011ರ ಆದೇಶದಲ್ಲಿ ನಿಗದಿಪಡಿಸಿರುವ ರೂ. 15,000/- (ಹದಿನೈದು ಸಾವಿರ ರೂಪಾಯಿಗಳು) ಗಳ ಸಂಭಾವನೆ (ವಾಹನ ಭತ್ಯೆಯು ಸೇರಿದಂತೆ)ಯನ್ನು ಏಕವ್ಯಕ್ತಿ ಆರೋಪಿತರಾಗಿರುವ ಇಲಾಖಾ ವಿಚಾರಣೆ ಪ್ರಕರಣಗಳಿಗೆ ಅನ್ವಯಿಸುವಂತೆ ಮುಂದುವರೆಸಲಾಗಿದೆ ಜಂಟಿ ಇಲಾಖಾ ವಿಚಾರಣೆ ಪ್ರಕರಣಗಳಲ್ಲಿ ನೀಡಬಹುದಾದ ಸಂಭಾವನೆಯನ್ನು ವಾಹನ ಭತ್ಯೆಯ ಸೇರಿದಂತೆ ಈ ಕೆಳಗಿನಂತೆ ನಿಗದಿಪಡಿಸಲಾಗಿದೆ.

(ಅ) ಇಬ್ಬರಿಂದ ಐದು ಆರೋಪಿತ ವ್ಯಕ್ತಿಗಳಿರುವ ಜಂಟಿ ಇಲಾಖಾ ವಿಚಾರಣಾ ಪ್ರಕರಣಗಳಿಗೆ ರೂ. 20,000/- (ಇಪ್ಪತ್ತು ಸಾವಿರ ರೂಪಾಯಿಗಳು).

(ಆ) ಐದು ಆರೋಪಿತ ವ್ಯಕ್ತಿಗಳಿಗಿಂತ ಹೆಚ್ಚಿನ ಆರೋಪಿತ ವ್ಯಕ್ತಿಗಳ ಜಂಟಿ ಇಲಾಖಾ ವಿಚಾರಣಾ ಪ್ರಕರಣಗಳಿಗೆ ರೂ. 25,000/- (ಇಪ್ಪತ್ತೈದು ಸಾವಿರ ರೂಪಾಯಿಗಳು).

ಆರ್ಥಿಕ ಇಲಾಖೆಯು ದಿನಾಂಕ : 07-11-2014ರ ಟಿಪ್ಪಣಿ ಸಂಖ್ಯೆ : ಆಇ 865 ವೆಚ್ಚ-12/2014ರಲ್ಲಿ ನೀಡಿದ ಸಹಮತಿಯನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಾ॥ ಮಂಗಳ ಜಿ.ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು-1)

**P.R. 59**

**SC 100**

## ಒಳಾಡಳಿತ ಸಚಿವಾಲಯ

**ವಿಷಯ :** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ಹೊಸದಾಗಿ 5 ಮಾರುತಿ ಸುಜುಕಿ ಸ್ವಿಫ್ಟ್ ಡಿಸೈರ್ ವಿಎಕ್ಸ್ಐ ವಾಹನಗಳನ್ನು ಖರೀದಿಸಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :** ಅಭಿಯೋಗ ನಿರ್ದೇಶಕರ ಪ್ರಸ್ತಾವನೆ ಸಂಖ್ಯೆ : ಡಿಪಿಎನ್/ಲೆಕ್ಕ-1/155/2010-11, ದಿನಾಂಕ : 21-10-2014 ಮತ್ತು 28-10-2014.

**ಪ್ರಸ್ತಾವನೆ :**

ಮೇಲೆ ಓದಲಾದ ಪ್ರಸ್ತಾವನೆಗಳಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ನಿರ್ದೇಶನಾಲಯಕ್ಕೆ ಒಳಪಡುವಂತೆ ರಾಜ್ಯದಲ್ಲಿ ಒಟ್ಟು 7 ವಲಯ ಕಛೇರಿಗಳಿದ್ದು, ಅವುಗಳು ಬೆಂಗಳೂರು ನಗರ ವಲಯ, ಬೆಂಗಳೂರು ಗ್ರಾಮಾಂತರ ವಲಯ, ಮೈಸೂರು ವಿಭಾಗ, ದಾವಣಗೆರೆ ವಲಯ, ಮಂಗಳೂರು ವಲಯ, ಗುಲ್ಬರ್ಗಾ ವಲಯ ಮತ್ತು ಬೆಳಗಾಂ ವಲಯಗಳು ಈಗಾಗಲೇ ಸದರಿ ವಲಯಗಳಲ್ಲಿನ ಗುಲ್ಬರ್ಗಾ ಮತ್ತು ಬೆಳಗಾಂ ವಲಯ ಕಛೇರಿಗಳಿಗೆ ಸರ್ಕಾರದ ಆದೇಶ ಸಂಖ್ಯೆ : ಲಾ 85 ಪಿಸಿಇ 79, ದಿನಾಂಕ : 9-10-1979ರಲ್ಲಿ ಎರಡು ಡೀಜೆಲ್ ಜೀಪ್‌ಗಳನ್ನು ಖರೀದಿಸಲು ಅನುಮತಿಯನ್ನು ನೀಡಲಾಗಿದೆ ಎಂದು ತಿಳಿಸಿ, ಅದರಂತೆ ಸದರಿ 2 ವಲಯಗಳಿಗೆ ಈಗಾಗಲೇ 2 ವಾಹನಗಳನ್ನು ಉಪಯೋಗಿಸುತ್ತಿರುವುದಾಗಿ ತಿಳಿಸುತ್ತಾ, ಇನ್ನುಳಿದ 5 ವಲಯಗಳಿಗೆ ವಾಹನದ ಅವಶ್ಯಕತೆ ಇರುವುದಾಗಿ ತಿಳಿಸಿರುತ್ತಾರೆ.

ಮುಂದುವರೆದು, ಸದರಿ ವಲಯ ಕಛೇರಿಯ ಮುಖ್ಯಸ್ಥರು (ಕಾನೂನು ಅಧಿಕಾರಿ (ಹಿರಿಯ) ಇವರು ತಮ್ಮ ವಲಯಕ್ಕೆ ಸಂಬಂಧಿಸಿದಂತೆ ಎಲ್ಲಾ ತಾಲ್ಲೂಕು ಹಾಗೂ ಜಿಲ್ಲೆಯ ಅಭಿಯೋಜಕರುಗಳ ಕಛೇರಿಗಳಿಗೆ ಭೇಟಿ ನೀಡಿ, ಕಛೇರಿ ತಪಾಸಣೆ ಹಾಗೂ ಅಭಿಯೋಜನಾ ಕಾರ್ಯ ನಿರ್ವಹಣೆಯ ಬಗ್ಗೆ ಮೇಲ್ವಿಚಾರಣೆ ಮಾಡುತ್ತಿರಬೇಕಾಗುತ್ತದೆ ಎಂದು ಮತ್ತು ಪ್ರತಿ ಜಿಲ್ಲೆಯ ಎಸ್.ಪಿ. ಯವರು ಅಭಿಯೋಜಿಸುವ ಮಾಸಿಕ ಅಪರಾಧ ಸಭೆಗಳಿಗೆ ಭಾಗವಹಿಸಬೇಕಾಗುತ್ತದೆ ಎಂದು, ಅಲ್ಲದೇ ತೀವ್ರತರವಾದ ಪ್ರಕರಣಗಳಲ್ಲಿ ಸ್ಥಳ ಪರೀಕ್ಷೆಗಾಗಿ ಹೋಗಬೇಕಾಗುವುದರಿಂದ, ಸದರಿ ವಲಯಗಳ ಮುಖ್ಯಸ್ಥರುಗಳಿಗೆ ವಾಹನದ ಅಗತ್ಯತೆಯನ್ನು ಒತ್ತಿ ಹೇಳಿರುತ್ತಾರೆ.

ಮುಂದುವರೆದು, ಅಭಿಯೋಗ ನಿರ್ದೇಶಕರು ಆರ್‌ಎನ್‌ಎಸ್ ಮೋಟರ್ಸ್, ಯಶವಂತಪುರ ಇವರು ಮಾರುತಿ ಸುಜುಕಿ ಸ್ವೀಫ್ಟ್ ಡೀಸೈರ್ ವಾಹನದ ಅಧಿಕೃತ ಮಾರಾಟಗಾರರಾಗಿದ್ದು, ಕಾರ್‌ದರ ಪಟ್ಟಿಯನ್ನು ಅವರಿಂದ ಪಡೆದಿದ್ದು. ಸರ್ಕಾರದ ಡಿಜಿಎಸ್ ಮತ್ತು ಡಿ. ಪ್ರಕಾರ ಒಂದು ಕಾರಿಗೆ ರೂ. 5,28,864,32/- ಆಗುತ್ತದೆ ಎಂದು ತಿಳಿಸಿ ಸದರಿ ಕಂಪನಿಯಿಂದ ಇನ್‌ವಾಯ್ಸ್‌ಗಳನ್ನು ಪಡೆದು ಸರ್ಕಾರಕ್ಕೆ ಮಾಹಿತಿಗಾಗಿ ಕಳುಹಿಸಿರುತ್ತಾರೆ.

ನಿರ್ದೇಶಕರು ಅಭಿಯೋಗ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಬೆಳಗಾಂ ಮತ್ತು ಗುಲ್ಬರ್ಗಾ ವಲಯ ಕಛೇರಿಗಳನ್ನು ಹೊರತುಪಡಿಸಿ, ಬೆಂಗಳೂರು ನಗರ ವಲಯ, ಬೆಂಗಳೂರು ಗ್ರಾಮಾಂತರ ವಲಯ, ಮೈಸೂರು ವಿಭಾಗ, ದಾವಣಗೆರೆ ವಲಯ, ಮಂಗಳೂರು ವಲಯದ, ಒಟ್ಟು 5 ವಲಯ ಕಛೇರಿಗಳ ಉಪಯೋಗಕ್ಕಾಗಿ 5 ವಾಹನಗಳನ್ನು ಪ್ರತಿ ವಾಹನಕ್ಕೆ ರೂ. 6.50 ಲಕ್ಷಗಳ ಮಿತಿಯೊಳಗೆ ಖರೀದಿಸಲು ಹಾಗೂ ಈ ಖರೀದಿಯನ್ನು ಕಡ್ಡಾಯವಾಗಿ ಕೆ.ಟಿ.ಪಿ.ಪಿ. ಕಾಯ್ದೆಯ ನಿಯಮಾನುಸಾರ ಮಾಡಿಕೊಳ್ಳಲು ಸರ್ಕಾರದ ಮಂಜೂರಾತಿಯನ್ನು ನೀಡಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 512 ಪಿಪಿಇ 2013, ಬೆಂಗಳೂರು, ದಿನಾಂಕ : 09ನೇ ಜನವರಿ, 2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಡಿಯಲ್ಲಿ ಕಾರ್ಯ ನಿರ್ವಹಿಸುವ ವಲಯ ಕಛೇರಿಗಳಾದ ಬೆಂಗಳೂರು ನಗರ ವಲಯ, ಬೆಂಗಳೂರು ಗ್ರಾಮಾಂತರ ವಲಯ, ಮೈಸೂರು ವಿಭಾಗ, ದಾವಣಗೆರೆ ವಲಯ, ಮಂಗಳೂರು ವಲಯ, ಒಟ್ಟು 5 ವಲಯ ಕಛೇರಿಗಳ ಉಪಯೋಗಕ್ಕಾಗಿ 5 ವಾಹನಗಳನ್ನು ಪ್ರತಿ ವಾಹನಕ್ಕೆ ರೂ. 6.50 ಲಕ್ಷಗಳ (ಆರು ಲಕ್ಷ ಐವತ್ತು ಸಾವರಿ ರೂಪಾಯಿಗಳು ಮಾತ್ರ) ಮಿತಿಯೊಳಗೆ ಹಾಗೂ ಕೆ.ಟಿ.ಪಿ.ಪಿ. ಕಾಯ್ದೆಯ ನಿಯಮಾಮಸಾರ ಖರೀದಿಸಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

ಸದರಿ ಪ್ರಸ್ತಾವನೆಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2014–00–114–0–02–051 ಸಾಮಾನ್ಯ ವೆಚ್ಚಗಳಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. ಆಇ/589–11/2014, ದಿನಾಂಕ : 05–01–2015ರ ಸಹಮತಿಯನುಸಾರ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವೆಂದ್ರಪ್ಪ ಕಟ್ಟಿಮನಿ**

P.R. 60

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು–ಬಿ).

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಕಲಬುರಗಿ ಜಿಲ್ಲೆಯ ಚಿತ್ತಾಪೂರ ತಾಲ್ಲೂಕಿನ ಹೆರೂರ (ಕೆ) ಗ್ರಾಮದ ಬಳಿಯಿರುವ ಬೆಣ್ಣೆತೊರಾ ಜಲಾಶಯದ ಹೆಸರನ್ನು **"ಹುತಾತ್ಮ ಶ್ರೀ ಅಪ್ಪಾರಾವ ಪಾಟೀಲ ಸಾಗರ"** ಎಂದು ಪುನರ್ ನಾಮಕರಣ ಮಾಡುವ ಬಗ್ಗೆ.

**ಪ್ರಸ್ತಾವನೆ:**

ಬೆಣ್ಣೆತೊರಾ ನದಿಯು ಮಹಾರಾಷ್ಟ್ರ ರಾಜ್ಯದ ಉಸ್ಮಾನಾಬಾದ್ ಜಿಲ್ಲೆಯ ಮಾಲೆಗಾಂವ್ ಗ್ರಾಮದ ಹತ್ತಿರ ಉಗಮಗೊಂಡು ಮಹಾರಾಷ್ಟ್ರದಲ್ಲಿ ಸುಮಾರು 45 ಕಿಮೀ. ಉದ್ದಕ್ಕೆ ಹರಿದು, ನಂತರ ಕರ್ನಾಟಕದಲ್ಲಿ ಸುಮಾರು 91 ಕಿಮೀ. ಉದ್ದಕ್ಕೆ ಹರಿದು ಕಲಬುರಗಿ ಜಿಲ್ಲೆಯ ಸೇಡಂ ತಾಲ್ಲೂಕಿನ ಮಳಖೇಡ ಗ್ರಾಮದ ಹತ್ತಿರ ಕಾಗಿಣಾ ನದಿಯಲ್ಲಿ ಸಂಗಮವಾಗುತ್ತದೆ. ಕಲಬುರಗಿ ಜಿಲ್ಲೆಯ ಚಿತ್ತಾಪೂರ ತಾಲ್ಲೂಕಿನ ಹೆರೂರ (ಕೆ) ಗ್ರಾಮದ ಬಳಿ ಬೆಣ್ಣೆತೊರಾ ನದಿಗೆ ಅಡ್ಡಲಾಗಿ ಅಣೆಕಟ್ಟನ್ನು ನಿರ್ಮಿಸಿ, ಕಲಬುರಗಿ ಜಿಲ್ಲೆಯ ಸೇಡಂ ತಾಲ್ಲೂಕಿನ 9 ಹಳ್ಳಿಗಳ 2,749 ಹೆಕ್ಟೇರ್ ಪ್ರದೇಶಕ್ಕೆ ಮತ್ತು ಚಿತ್ತಾಪೂರ ತಾಲ್ಲೂಕಿನ 41 ಹಳ್ಳಿಗಳ 17,485 ಹೆಕ್ಟೇರ್ ಪ್ರದೇಶಕ್ಕೆ ಅಂದರೆ, ಒಟ್ಟಾರೆ ಕಲಬುರಗಿ ಜಿಲ್ಲೆಯ 20,234 ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯವನ್ನು ಕಲ್ಪಿಸಲು ಬೆಣ್ಣೆತೊರಾ ಯೋಜನೆಯನ್ನು ರೂಪಿಸಲಾಗಿದೆ. 2001ರ ಡಿಸೆಂಬರ್‌ನಲ್ಲಿ ಅಣೆಕಟ್ಟೆಯ ಎಲ್ಲ ಕಾಮಗಾರಿಗಳು ಪೂರ್ಣಗೊಂಡಿದ್ದು, ಜಲಾಶಯದಲ್ಲಿ ನೀರನ್ನು ಶೇಖರಿಸಲಾಗುತ್ತಿದೆ 2005 ರಲ್ಲಿ ಪೂರ್ಣ ಸಂಗ್ರಹಣೆ ಮಾಡಲಾಗಿದೆ.

ಕಲಬುರಗಿ ಜಿಲ್ಲೆಯ, ಕಲಬುರಗಿ ತಾಲ್ಲೂಕಿನ ಮಹಾಗಾಂವ್ ಗ್ರಾಮದಲ್ಲಿ ದಿನಾಂಕ: 14–01–1924 ರಂದು ಶ್ರೀ ಅಪ್ಪಾರಾವ ಪಾಟೀಲ ಜನಿಸಿದರು. ಇವರು ಚಿಕ್ಕಂದಿನಿಂದಲೇ ಸಂಘಟನಾ ಕಾರ್ಯ ಮತ್ತು ಹೋರಾಟ ಮನೋಧರ್ಮವನ್ನು ಹೊಂದಿದವರಾಗಿದ್ದು, ಸ್ವತಂತ್ರ ಭಾರತದ ಕನಸನ್ನು ನನಸಾಗಿಸಲು ಹೋರಾಡಿದ ಮಹಾವೀರರಲ್ಲೊಬ್ಬರಾಗಿರುತ್ತಾರೆ. ಭಾರತದ ಒಕ್ಕೂಟಕ್ಕೆ ಹೈದರಾಬಾದ್ ಸಂಸ್ಥಾನವನ್ನು ವಿಲೀನಗೊಳಿಸಲು ನಡೆದ ಹೋರಾಟದಲ್ಲಿ ಇವರ ಪಾತ್ರವೂ ಇದೆಯೆನ್ನಲಾಗಿದೆ. ತುರ್ಕ ಚಿಂಚೋಳಿ ಗ್ರಾಮದ ಮೇಲೆ ಭಯೋತ್ಪಾದಕರು ಮಾಡಿದ ದಾಳಿಯ ಸಮಯದಲ್ಲಿ ಶ್ರೀ ಅಪ್ಪಾರಾವ ಪಾಟೀಲ ರವರು ವೀರಾವೇಶದ ಹೋರಾಟವನ್ನು ಮಾಡುತ್ತಾ, ದಿನಾಂಕ: 12–10–1948 ರಂದು ರಾಷ್ಟ್ರಕ್ಕಾಗಿ ಪ್ರಾಣವನ್ನರ್ಪಿಸಿ ಹುತಾತ್ಮರಾಗಿರುತ್ತಾರೆ.

ಹೈದರಾಬಾದ್ ಕರ್ನಾಟಕ ಭಾಗದ ಜನತೆಯು ಹಾಗೂ ಆ ಭಾಗದ ಜನಪ್ರತಿನಿಧಿಗಳು ಬೆಣ್ಣೆತೊರಾ ಜಲಾಶಯಕ್ಕೆ ಹುತಾತ್ಮರಾದ ಶ್ರೀ ಅಪ್ಪಾರಾವ ಪಾಟೀಲ್ ಇವರ ಹೆಸರನ್ನು ಇಡಲು ಬಹುವಾಗಿ ಆಶಿಸುತ್ತಿದ್ದು, ಈ ಕುರಿತಂತೆ ಆ ಭಾಗದ ಬಹಳಷ್ಟು ಜನಪ್ರತಿನಿಧಿಗಳಿಂದ ಮನವಿಗಳು ಬಂದಿರುತ್ತದೆ. ಈ ಹಿನ್ನೆಲೆಯಲ್ಲಿ **"ಬೆಣ್ಣೆತೊರಾ ಜಲಾಶಯ"** ವನ್ನು **"ಹುತಾತ್ಮ ಶ್ರೀ ಅಪ್ಪಾರಾವ ಪಾಟೀಲ ಸಾಗರ"** ಎಂದು ನಾಮಕರಣ ಮಾಡಿದಲ್ಲಿ ಉತ್ತರ ಕರ್ನಾಟಕದ ಅದರಲ್ಲೂ ಹೈದರಾಬಾದ್ ಕರ್ನಾಟಕದ ಜನರ ಅಭಿಲಾಷೆಯನ್ನು ನೆರವೇರಿಸಿದಂತಾಗುತ್ತದೆ ಎಂದು ಅಭಿಪ್ರಾಯ ಪಡಲಾಗಿದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 55 ವಿಬ್ಯಾಇ 2014, ಬೆಂಗಳೂರು, ದಿನಾಂಕ 27.12.2014**

ಕಲಬುರಗಿ ಜಿಲ್ಲೆಯ ಚಿತ್ತಾಪೂರ ತಾಲ್ಲೂಕಿನ ಹೆರೂರ (ಕೆ) ಗ್ರಾಮದ ಬಳಿ ನಿರ್ಮಿಸಲಾಗಿರುವ **"ಬೆಣ್ಣೆತೊರಾ ಜಲಾಶಯ"** ದ ಹೆಸರನ್ನು **"ಹುತಾತ್ಮ ಶ್ರೀ ಅಪ್ಪಾರಾವ ಪಾಟೀಲ ಸಾಗರ"** ಎಂದು ಪುನರ್ ನಾಮಕರಣ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ನಾಗರಾಜ.**

P.R. 195
SC 200

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ತಾಂತ್ರಿಕ–4).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಯೋಜನಾ ಇಲಾಖೆಯ ಅಪರ/ಜಂಟಿ ಕಾರ್ಯದರ್ಶಿಗಳ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 29 ಸಅಸೇ 2008, ದಿನಾಂಕ : 27–02–2008.
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 248 ಸಅಸೇ 2013, ದಿನಾಂಕ : 17–04–2013.
3. ಯೋಜನಾ ಇಲಾಖೆಯ ಕಡತ ಸಂಖ್ಯೆ : ಪಿಡಿ 19 ಎಸ್‌ಪಿಬಿ 2012.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 27–02–2008ರ ಸರ್ಕಾರಿ ಆದೇಶದಲ್ಲಿ ಯೋಜನಾ ಇಲಾಖೆಯಲ್ಲಿ ಅಪರ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಹುದ್ದೆಗಳೊಂದಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ. ಸದರಿ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (2)ರಲ್ಲಿ ದಿನಾಂಕ : 01–04–2013 ರಿಂದ ಒಂದು ವರ್ಷದ ಅವಧಿಗೆ ಅಪರ ಕಾರ್ಯದರ್ಶಿ/ಜಂಟಿ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಹುದ್ದೆಗಳೊಂದಿಗೆ ಮುಂದುವರೆಸಲಾಗಿದೆ. ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಕಡತದಲ್ಲಿ ಯೋಜನಾ ಇಲಾಖೆಯು ಮೇಲ್ಕಂಡ ಹುದ್ದೆಗಳ ಅವಧಿಯು ದಿನಾಂಕ : 31–03–2013ಕ್ಕೆ ಮುಕ್ತಾಯವಾಗಲಿರುವುದರಿಂದ ಹಾಗೂ ಸದರಿ ಹುದ್ದೆಗಳನ್ನು ಮುಂದಿನ ಒಂದು ವರ್ಷದ ಅವಧಿಗೆ ವಿಸ್ತರಿಸುವ ಅವಶ್ಯಕತೆಯಿರುವುದರಿಂದ, ಅಪರ ಕಾರ್ಯದರ್ಶಿ/ಜಂಟಿ ಕಾರ್ಯದರ್ಶಿ ಹುದ್ದೆಯನ್ನು ಈ ಕೆಳಕಂಡ ಪೂರಕ ಹುದ್ದೆಗಳೊಂದಿಗೆ ದಿನಾಂಕ : 01–04–2014 ರಿಂದ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರಿಸುವಂತೆ ಕೋರಿರುತ್ತಾರೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಶೀಘ್ರಲಿಪಿಗಾರ | 1 ಹುದ್ದೆ |
| 2 | ಕಿರಿಯ ಸಹಾಯಕ | 1 ಹುದ್ದೆ |
| 3 | ದಲಾಯತ್ | 1 ಹುದ್ದೆ (ಹೊರ ಗುತ್ತಿಗೆಯಿಂದ) |

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 533 ಸಲುಸೇ 2014, ಬೆಂಗಳೂರು, ದಿನಾಂಕ : 20ನೇ ಜನವರಿ, 2015.**

ಯೋಜನಾ ಇಲಾಖೆಯಲ್ಲಿನ ಅಪರ ಕಾರ್ಯದರ್ಶಿ/ಜಂಟಿ ಕಾರ್ಯದರ್ಶಿಗಳ ಹುದ್ದೆಯನ್ನು ದಿನಾಂಕ : 01–04–2014 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಡನೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಶೀಘ್ರಲಿಪಿಗಾರ | 1 ಹುದ್ದೆ |
| 2 | ಕಿರಿಯ ಸಹಾಯಕ | 1 ಹುದ್ದೆ |
| 3 | ದಲಾಯತ್ | 1 ಹುದ್ದೆ (ಹೊರ ಗುತ್ತಿಗೆಯಿಂದ) |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ : 10–07–1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–6).

**P.R. 106**

## ಒಳಾಡಳಿತ ಸಚಿವಾಲಯ

**ವಿಷಯ :** ತುಮಕೂರಿನ ಅಪರ ಸಿಜೆ ಮತ್ತು ಸಿಜೆಎಂ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಮತ್ತು ಅವರ ಕಛೇರಿಗೆ ಪೂರಕ ಸಿಬ್ಬಂದಿಯ ಹುದ್ದೆಗಳ ಸೃಜನೆ ಬಗ್ಗೆ.

**ಓದಲಾಗಿದೆ :**

1. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್/ಸಿಶಾ1/264/2012–13, ದಿನಾಂಕ : 27–02–2013 ಮತ್ತು ದಿನಾಂಕ : 23–06–2014.
2. ಸರ್ಕಾರದ ಆದೇಶ ಸಂಖ್ಯೆ : ಲಾ 298 ಎಲ್‌ಸಿಇ 1980, ದಿನಾಂಕ : 23–02–1981.
3. ಅಭಿಯೋಗ ನಿರ್ದೇಶಕರ ಪ್ರಸ್ತಾವನೆ ದಿನಾಂಕ : 26–09–2014.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ : 27–02–2013ರ ಪತ್ರದಲ್ಲಿ ತುಮಕೂರಿನ ಅಪರ ಸಿಜೆ ಮತ್ತು ಸಿಜೆಎಂ ನ್ಯಾಯಾಲಯಕ್ಕೆ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಮತ್ತು ಅಧೀನ ಸಿಬ್ಬಂದಿ ವರ್ಗದವರ ಹುದ್ದೆಗಳನ್ನು ಸೃಜಿಸುವಂತೆ ಉಪ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ರವರು ಕೋರಿರುತ್ತಾರೆ. ಹಾಗೂ ಸರ್ಕಾರಿ ಮತ್ತು ಅಭಿಯೋಗ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳು 2012ರ ಪ್ರಕಾರ ಎಲ್ಲಾ ಸಹಾಯಕ ಸರ್ಕಾರಿ ಅಭಿಯೋಜಕರ ಹಾಗೂ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಗಳಿಗೆ ಬೆರಳಚ್ಚುಗಾರರ ಹುದ್ದೆಯ ಬದಲಿಗೆ ಶೀಘ್ರಲಿಪಿಗಾರರ ಹುದ್ದೆಗಳು ಮಂಜೂರಾಗಿರಬೇಕಾಗಿರುತ್ತದೆ ಎಂದು ದಿನಾಂಕ : 23–06–2014ರ ಪ್ರಸ್ತಾವನೆಯಲ್ಲಿ ಅಭಿಯೋಗ ನಿರ್ದೇಶಕರು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ದಾವಣಗೆರೆಯ ಅಧಿಕ ಸಿವಿಲ್ ಜಡ್ಜ್ ಮತ್ತು ಸಿ.ಜೆ.ಎಂ. ನ್ಯಾಯಾಲಯವನ್ನು ತುಮಕೂರಿನ ಸಿವಿಲ್ ಜಡ್ಜ್ ಮತ್ತು ಸಿ.ಜೆ.ಎಂ. ನ್ಯಾಯಾಲಯ ಎಂಬುದಾಗಿ ಪದನಾಮಾಂಕಿತಗೊಳಿಸಿ ವರ್ಗಾಯಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಅಭಿಯೋಗ ನಿರ್ದೇಶಕರು ತುಮಕೂರಿನ ಅಪರ ಸಿವಿಲ್ ಜಡ್ಜ್ ಮತ್ತು ಸಿಜೆಎಂ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಹಾಗೂ ಅವರ ಕಛೇರಿಗೆ ಪೂರಕ ಸಿಬ್ಬಂದಿಯ ಹುದ್ದೆಯ ಸೃಜನೆಗೆ ಸಂಬಂಧಿಸಿದಂತೆ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು–1 ಹುದ್ದೆ, ಶೀಘ್ರಲಿಪಿಗಾರರು–1 ಹುದ್ದೆ ಮತ್ತು ದಲಾಯತ್–1 ಹುದ್ದೆಗಳನ್ನು ಸೃಜಿಸುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರದ ಮಂಜೂರಾತಿ ನೀಡಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 175 ಪಿಪಿಇ 2013, ಬೆಂಗಳೂರು, ದಿನಾಂಕ : 22ನೇ ಜನವರಿ 2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ತುಮಕೂರಿನ ಅಪರ ಸಿಜೆ ಮತ್ತು ಸಿಜೆಎಂ. ನ್ಯಾಯಾಲಯಕ್ಕೆ ಈ ಕೆಳಕಂಡ ಹುದ್ದೆಗಳನ್ನು ಸೃಜಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಸೃಜಿಸಿರುವ ಹುದ್ದೆಗಳು |
|---|---|---|
| 1 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು | 01 |
| 2 | ಶೀಘ್ರಲಿಪಿಗಾರರು | 01 |
| | **ಒಟ್ಟು** | **02** |

ಸದರಿ ಹುದ್ದೆಗಳಿಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ "2014–ನ್ಯಾಯಪರಿಪಾಲನೆ–00–114–ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು–0–02–ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು 003–ಸಿಬ್ಬಂದಿ ವೇತನ" ಇದರಡಿ ಭರಿಸತಕ್ಕದ್ದು.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. ಆಇ 582 ವೆಚ್ಚ–11/2014, ದಿನಾಂಕ : 08–01–2015ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ದೇವೆಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ).

**P.R. 100**

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀಮತಿ ಎಂ.ಎನ್. ರಂಜನಾ ರಾವ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಅರಕಲಗೂಡು ಇವರ ವಿರುದ್ಧದ ಇಲಾಖಾ ವಿಚಾರಣೆ ಕುರಿತು.

**ಓದಲಾಗಿದೆ :**
1. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ನೀಡಿರುವ ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ : ಡಿಪಿಎನ್/ಎಂಡಿವೈ/ಸಿಆರ್–32/2001, ದಿನಾಂಕ : 07–02–2012.
2. ಅಧಿಕಾರಿಯವರ ವಿವರಣಾ ಪತ್ರ ದಿನಾಂಕ : 01–03–2012.
3. ಅಭಿಯೋಗ ನಿರ್ದೇಶಕರ ಆದೇಶ ಸಂಖ್ಯೆ : ಡಿಪಿಎಸ್/ಎಂಡಿವೈ/ಸಿಆರ್–32/2011, ದಿನಾಂಕ : 22–05–2012 ಮತ್ತು 12–06–2013.
4. ವಿಚಾರಣಾ ವರದಿ ದಿನಾಂಕ : 30–07–2014.
5. ಅಭಿಯೋಗ ನಿರ್ದೇಶಕರ ಪತ್ರ ಸಂಖ್ಯೆ : ಡಿಪಿಎಸ್/ಎಂಡಿವೈ/ಸಿಆರ್–32/2011, ದಿನಾಂಕ : 07–08–2014.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಶ್ರೀಮತಿ ಎಂ.ಎನ್. ರಂಜನಾ ರಾವ್, ಇಂದಿನ ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆ.ಎಂ.ಎಫ್‌ಸಿ ನ್ಯಾಯಾಲಯ, ಕೆ.ಆರ್. ಪೇಟೆ, ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಸದರಿಯವರು ಕರ್ತವ್ಯಲೋಪ ಎಸಗಿರುವ ಬಗ್ಗೆ ದೋಷರೋಪನಾ ಪಟ್ಟಿಗಳೊಂದಿಗೆ ಕಾರಣ ಕೇಳುವ ಸೂಚನಾ ಪತ್ರವನ್ನು ನೀಡಿ ಸದರಿ ಅಧಿಕಾರಿಯವರಿಂದ ವಿವರಣೆಯನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಶ್ರೀಮತಿ ಎಂ.ಎನ್. ರಂಜನಾ ರಾವ್, ಇಂದಿನ ಸಹಾಯಕ ಸರ್ಕಾರಿ ಅಭಿಯೋಜಕರು, ಇವರು ತಮಗೆ ನೀಡಲಾದ ಆಪಾದನೆಗಳನ್ನು ನಿರಾಕರಿಸಿ, ವಿವರಣೆಯನ್ನು ಸಲ್ಲಿಸಿ, ತಮ್ಮನ್ನು ಆಪಾದನೆಗಳಿಂದ ದೋಷಮುಕ್ತಗೊಳಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಆರೋಪಿತ ಅಧಿಕಾರಿಯು ನೀಡಿರುವ ವಿವರಣೆಯು ಸಮಂಜಸವಾಗಿರದೇ ಇದ್ದುದರಿಂದ, ವಿಚಾರಣಾಧಿಕಾರಿಯವರನ್ನು ಮತ್ತು ಮಂಡನಾಧಿಕಾರಿಯವರನ್ನು ನೇಮಕ ಮಾಡಿ ವಿಚಾರಣೆಯನ್ನು ಕೈಗೊಳ್ಳುವಂತೆ ಮತ್ತು ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿ ವಿಚಾರಣಾ ಅಧಿಕಾರಿಯವರು ಶ್ರೀಮತಿ ಎಂ.ಎನ್. ರಂಜನಾ ರಾವ್ ಇವರ ಮೇಲಿನ ಆರೋಪಗಳಿಗೆ ಸಂಬಂಧಿಸಿದಂತೆ ಆಪಾದಿಸಲಾದ ಎಲ್ಲಾ ಆಪಾದನೆಗಳು ರುಜುವಾತು ಆಗಿರುವುದಿಲ್ಲವೆಂದು ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರಲ್ಲಿ ನಿರ್ದೇಶಕರು ಅಭಿಯೋಗ ಇವರು ವಿಚಾರಣಾ ಅಧಿಕಾರಿಯವರು ಸಲ್ಲಿಸಿರುವ ವಿಚಾರಣಾ ವರದಿಯನ್ನು ಲಗತ್ತಿಸಿ ಸರ್ಕಾರಕ್ಕೆ ಮುಂದಿನ ಕ್ರಮಕ್ಕಾಗಿ ಕಳುಹಿಸಿರುತ್ತಾರೆ

ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ, ವಿಚಾರಣಾಧಿಕಾರಿಯವರು ಆರೋಪಿತ ಅಧಿಕಾರಿಯ ಮೇಲೆ ಆರೋಪಿಸಲಾದ ಮೂರು ಆರೋಪಗಳು ನಕರಾತ್ಮಕವಾಗಿವೆ ಎಂದು ವಿಚಾರಣಾ ವರದಿಯಲ್ಲಿ ನಿರ್ಣಯಿಸಿರುವುದರಿಂದ, ಸದರಿ ಪ್ರಕರಣದಲ್ಲಿ ಶ್ರೀಮತಿ ಎಂ.ಎನ್. ರಂಜನಾ ರಾವ್ ಇವರ ವಿರುದ್ಧದ ಆರೋಪಗಳಿಂದ ಮುಕ್ತಗೊಳಿಸುವುದು ಸೂಕ್ತವಾಗಿದೆ ಎಂದು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 350 ಪಿಪಿಇ 2014, ಬೆಂಗಳೂರು, ದಿನಾಂಕ : 22ನೇ ಜನವರಿ 2015.**

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀಮತಿ ಎಂ.ಎನ್. ರಂಜನಾ ರಾವ್, ಸಹಾಯಕ ಸರ್ಕಾರಿ ಅಭಿಯೋಜಕರು, ಹಾಲಿ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಅರಕಲಗೂಡು ಇವರ ವಿರುದ್ಧದ ಆರೋಪಗಳಿಂದ ದೋಷಮುಕ್ತಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ದೇವೆಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು-ಬಿ).

P.R. 101

## ಸಹಕಾರ ಸಚಿವಾಲಯ

**ವಿಷಯ :** ನಿರ್ದೇಶನ ಮತ್ತು ಆಡಳಿತ-125-ಆಧುನೀಕರಣ ಯೋಜನೆಯಲ್ಲಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಇ 54 ಅಂಆಸ(ಎ) 2014, ದಿನಾಂಕ : 05-05-2014.
2. ಸರ್ಕಾರದ ಆದೇಶ ಸಂಖ್ಯೆ : ಸಇ 201 ಸಿಎಲ್‌ಎಸ್ 2014, ದಿನಾಂಕ : 30-05-2014 ಮತ್ತು 23-09-2014.
3. ತಿದ್ದುಪಡಿ ಆದೇಶ ಸಂಖ್ಯೆ : ಸಇ 201 ಸಿಎಲ್‌ಎಸ್ 2014, ದಿನಾಂಕ : 03-12-2014.
4. ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 05 ಟಿಎಫ್‌ಪಿ 2014, ದಿನಾಂಕ : 14-10-2014.
5. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಸಸಂನಿ/ಎಸ್‌ವಿಓ/86/2014-15, ದಿನಾಂಕ : 14-01-2015.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ 2014-15ನೇ ಸಾಲಿಗೆ ಸಹಕಾರ ಇಲಾಖೆಯ ನಿರ್ದೇಶನ ಮತ್ತು ಆಡಳಿತ-125-ಆಧುನೀಕರಣ ಯೋಜನಾ ಕಾರ್ಯಕ್ರಮದ ಅನುಷ್ಠಾನಕ್ಕಾಗಿ ರೂ. 85.56 ಲಕ್ಷಗಳ ಆಯವ್ಯಯದ ಅವಕಾಶ ಕಲ್ಪಸಲಾಗಿದೆ.

ಮೇಲೆ ಓದಲಾದ (2)ರ ಸರ್ಕಾರದ ಆದೇಶಗಳಲ್ಲಿ ಈ ಯೋಜನೆ ಅನುಷ್ಠಾನಕ್ಕಾಗಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಿ ಮೊದಲನೇ ಮತ್ತು ಎರಡನೇ ತ್ರೈಮಾಸಿಕಗಳಲ್ಲಿ ತಲಾ ರೂ. 21.39 ಲಕ್ಷದಂತೆ ಒಟ್ಟು ರೂ. 42.78 ಲಕ್ಷಗಳನ್ನು ಬಿಡುಗಡೆ ಮಾಡಿ ಆದೇಶಿಸಲಾಗಿದೆ.

ಮೇಲೆ ಓದಲಾದ (3)ರ ತಿದ್ದುಪಡಿ ಆದೇಶದಂತೆ ಹಣ ಡ್ರಾ ಮಾಡುವ ಅಧಿಕಾರವನ್ನು ಭಾಗಶಃ ಮಾರ್ಪಡಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ (4)ರ ಸರ್ಕಾರದ ಆದೇಶದಲ್ಲಿ ಹಿಂದೆ ಬಿಡುಗಡೆ ಮಾಡಿದ ಅನುದಾನದ ಶೇಕಡಾ 75 ರಷ್ಟು ಬಳಕೆಯಾಗಿದ್ದಲ್ಲಿ ಯೋಜನೆಯ ವಾರ್ಷಿಕ ಒಟ್ಟು ಅವಕಾಶದ ಶೇಕಡಾ 25 ರಷ್ಟನ್ನು ಮೂರನೇ ಕಂತಿನಲ್ಲಿ ಬಿಡುಗಡೆ ಮಾಡಲು ಇಲಾಖೆಯ ಪ್ರಧಾನ ಕಾರ್ಯದರ್ಶಿಯವರಿಗೆ ಅಧಿಕಾರ ನೀಡಲಾಗಿದೆ.

ಮೇಲೆ ಓದಲಾದ (5)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಮೊದಲ ಎರಡು ತ್ರೈಮಾಸಿಕಗಳಲ್ಲಿ ಬಿಡುಗಡೆಯಾದ ರೂ. 42.78 ಲಕ್ಷಗಳಲ್ಲಿ ರೂ. 38.22 ಲಕ್ಷಗಳು ಈಗಾಗಲೇ ವೆಚ್ಚವಾಗಿರುವುದಕ್ಕೆ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸಿ ಬಿಡುಗಡೆಗೆ ಬಾಕಿ ಇರುವ ಆಯವ್ಯಯದ ರೂ. 42.78 ಲಕ್ಷಗಳಲ್ಲಿ ಚಿಕ್ಕಮಗಳೂರು ಉಪನಿಬಂಧಕರು ಮತ್ತು ಸಹಾಯಕ ನಿಬಂಧಕರ ಕಛೇರಿಗಳ ಆಧುನೀಕರಣ ಕಾಮಗಾರಿಗೆ ಒಟ್ಟು ರೂ. 16.90 ಲಕ್ಷಗಳನ್ನು ಉಳಿದ ಮೊತ್ತವನ್ನು ಎಂಪಿಕ್ ಕಾರ್ಯಕ್ರಮದಂತೆ ವೆಚ್ಚ ಮಾಡಲು ಮೂರನೇ ಕಂತಿನ ಮೊತ್ತ ರೂ. 21.39 ಲಕ್ಷಗಳನ್ನು ಬಿಡುಗಡೆಗೊಳಿಸಲು ಸರ್ಕಾರಕ್ಕೆ ಪ್ರಸ್ತಾವೆ ಸಲ್ಲಿಸಿರುತ್ತಾರೆ. ಈಗಾಗಲೇ ಬಿಡುಗಡೆ ಆಗಿರುವ ಮೊತ್ತದ ಪೈಕಿ ರೂ. 38.32 ಲಕ್ಷ ಖರ್ಚಾಗಿದ್ದು, ಇದು ಬಿಡುಗಡೆಯ ಶೇಕಡಾ 89 ಆಗಿರುತ್ತದೆ.

ಸದರಿ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 201 ಸಿಎಲ್‌ಎಸ್ 2014, ಬೆಂಗಳೂರು, ದಿನಾಂಕ : 17-01-2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2014-15ನೇ ಸಾಲಿನ ಯೋಜನಾ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಲೆಕ್ಕಶೀರ್ಷಿಕೆ 2425-00-001-0-01-ನಿರ್ದೇಶನ ಮತ್ತು ಆಡಳಿತ-125-ಆಧುನೀಕರಣ ಯೋಜನೆಯಲ್ಲಿ ಲಭ್ಯವಿರುವ ಅನುದಾನದಲ್ಲಿ ಮೂರನೇ ತ್ರೈಮಾಸಿಕದಲ್ಲಿ ರೂ. 21.39 ಲಕ್ಷಗಳನ್ನು (ಇಪ್ಪತ್ತೊಂದು ಲಕ್ಷದ ಮೂವತ್ತೊಂಬತ್ತು ಸಾವಿರ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಿದೆ.

ಈ ಹಣವನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ), ಕೇಂದ್ರ ಕಛೇರಿ, ಬೆಂಗಳೂರು ಇವರು ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿಯೊಂದಿಗೆ ಡ್ರಾ ಮಾಡಲು ಅಧಿಕಾರ ನೀಡಲಾಗಿದೆ. ಈ ಬಗ್ಗೆ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 5 ಟಿಎಫ್‌ಪಿ 2014, ದಿನಾಂಕ : 14-10-2014ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

P.R. 102
SC-25

ಮುದ್ರಕರು ಹಾಗೂ ಪ್ರಕಾಶಕರು:- ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು-59.